ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ

ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)

**೭ನೆಯ ಸಂಚಿಕೆ**

**ಸಪ್ತಮ ಶತಕ**

**(ಸವ್ಯಾಖ್ಯಾನ)**

ಬೆಂಗಳೂರು

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

1931.

೧೦ ಸಂಚಿಕೆಗಳುಳ್ಳ ಸಮಗ್ರ-ಪ್ರಬನ್ಧದ ಕ್ರಯ ರೂ. 6-0-0.

ಈ ಸಂಚಿಕೆಯ ಬೆಲೆ 12 ಆಣೆ.

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ಸಪ್ತಮ ಶತಕ)

ಶ್ರೀ ಕಲ್ಕಿಸಿಂಹ ಭಗವದ್ವಿರಚಿತ—ವ್ಯಾಖ್ಯಾನಸಹಿತ.

---

ಶ್ರೀನಾಥ ಜಯತಿ ಕಲ್ಕಿಃ ನೃಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತಾರಣೋ ಹರಿಃ ॥

## ಸಪ್ತಮಶತಕದಲ್ಲಿ—ಪ್ರಥಮದಶಕ.

(ಉಣ್ಣಿಲಾವಿಯ—)

---

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ವಿಲಮ್ಬವನ್ನು ಸಹಿಸಲಾರದೆ—"ಪಞ್ಚೇನ್ದ್ರಿಯಗಳ ಬಾಧೆಗೆ ಒಳಪಡಿಸಿ ಎಷ್ಟುದಿನ ನನ್ನನ್ನು ಹೀಗೆ ಸನ್ತಾಪಗೊಳಿಸುತ್ತೀಯೋ ?"—ಎಂದು ಭಗವನ್ತನನ್ನು ಕುರಿತು ಆಕ್ರನ್ದನ ಮಾಡುತ್ತಾರೆ.)

---

(೧) ಉಣ್ಣಿಲಾವಿಯ ವೈವರಾಲ್ ಕುಮೈತೀರ್ತ್ತಿ
ಯೆನ್ನೈ ಯುನ್ಪಾದಪಙ್ಕಯಮ್,
ನಣ್ಣಿಲಾವಕೈಯೇ ನಲಿವಾನಿನ್ನ ಮೆಣ್ಣುಕಿನ್ರಾಯ್,
ಎಣ್ಣಿಲಾಪ್ಪೆರುಮಾಯನೇ ಯಿಮೈಯೋರ್ಕಳೇತ್ತು-
ಮುಲಕಮೂನ್ರುಡೈ,
ಅಣ್ಣಲೇ ಯಮುದೇ ಯಪ್ಪನೇ ಯೆನ್ನೈ ಯಾಳ್ವಾನೇ.

ಪ್ರ॥ ಉಣ್ಣಿಲಾವಿಯ (ಉಳ್ ನಿಲಾವಿಯ)-ಒಳಗೆ ಅನ್ತರ ಶತ್ರುಗಳಾದ, ಐವರಾಲ್--ಐದು ಇನ್ದ್ರಿಯಗಳಿಂದಲೂ, ಕುಮೈ -- ಹಿಂಸೆಯನ್ನು, ತೀರ್ರಾ- ಅನುಭವಿಸುವಂತೆ ಮಾಡಿ, ಎನ್ನೈ - (ಇವುಗಳಿಗೆ ಭಯಪಟ್ಟು ನಿನ್ನನ್ನೇ ಆಶ್ರಯಿಸಿದ) ನನ್ನನ್ನು, ಉ೯ ಪಾದಪಙ್ಕಯಮ್-ನಿನ್ನ ಪಾದಾಮ್ಬುಜಗಳನ್ನು, ನಣ್ಣಿಲಾವಕೈಯೇ-ಹೊಂದದಂತೆಯೇ, ಇನ್ನಮ್-ಈಗಲೂ, ನಲಿವಾ೯-(ಸಂಸಾರ ದಲ್ಲಿಟ್ಟು) ಕ್ಲೇಶಪಡಿಸಲು, ಎಣ್ಣುಕಿನ್ರಾಯ್- ಆಲೋಚಿಸುತ್ತೀಯೆ. ಎಣ್ಣಿಲಾ-- ಅಸಂಖ್ಯಾತವಾದ, ಪೆರುಮಾಯನೇ-ಮಹಾ ಮಾಯೆಗಳುಳ್ಳವನೇ (ಅಪರಿಚ್ಛಿನ್ನ ವಾದ ಪ್ರಕೃತಿಯನ್ನೇ ಪ್ರಕಾರವಾಗಿ ಉಳ್ಳವನೇ), ಇಮೈಯೋರ್‌ಕಳ್ ಏತ್ತುಮ್- ನಿತ್ಯಸೂರಿಗಳಿಂದ ಸ್ತುತಿಸಲ್ಪಡುವ, ಮೂನ್ರುಲಕಮ್ ಉಡೈ-ತ್ರಿವಿಧ ಚೇತನಾ ಚೇತನ ಪ್ರಪಂಚಗಳನ್ನು ವಶದಲ್ಲಿಟ್ಟುಕೊಂಡಿರುವ, ಅಣ್ಣಲೇ - ಸ್ವಾಮಿಯೇ, ಅಮುದೇ-ಅಮೃತದಂತೆ ನಿತ್ಯಭೋಗ್ಯನಾದವನೇ, ಅಪ್ಪನೇ-ಮಹೋಪಕಾರಕನೇ, ಎನ್ನೈ ಆಳ್ವಾನೇ-ನನ್ನನ್ನು ಆಳುವ ಸ್ವಾಮಿಯೇ !.

( ಸ-ಗಾ-ರ ॥ )—

**ಸಂಖ್ಯಾತೀತವಿಚಿತ್ರವೃತ್ತ ! ಭಗವ೯ ! ಸೂರೀನ್ದ್ರಸಂಸೇವಿತ !**
**ತ್ರೈಲೋಕ್ಯಾಧಿಪತೇ! ಪಯೋಽಮೃತನಿಧೇ! ಸ್ವಾಮಿ೯ ಪ್ರಭೋ ಮೇ! ಹರೇ!॥**
**ಅನ್ತರ್ವೈರಿಕುಲೇನ ಪಞ್ಚಕರಣಗ್ರಾಮೇಣ ಸಮ್ಪೀಡಿತಂ**
**ಮಾಮೇವಂ ತವ ಪಾದಪಙ್ಕಜನತೇರ್ದೂರೇ ಕುದಸ್ಯೇವ ಹಾ ! ॥**

ತಾ॥ ಅಸಂಖ್ಯಾತ ಮಾಯಾಚೇಷ್ಟಿತನೇ ! ನಿತ್ಯಸೂರಿ ಸಂಸೇವ್ಯನಾದ ತ್ರಿವಿಧ ಜಗತ್ಸ್ವಾಮಿಯೇ ! ಅಮೃತಪ್ರಾಯನಾದ ಮಹೋಪಕಾರಕನೇ! ನನ್ನನ್ನು ಆಳುವ ಸ್ವಾಮಿಯೇ !—ಇಂತಹ ದಿವ್ಯಸ್ವಭಾವವುಳ್ಳ ನೀನು, ಒಳಗೆ ಅನ್ತರ ಶತ್ರುಗಳಾದ ಪಂಚೇನ್ದ್ರಿಯಗಳಿಂದ ನಾನು ಹಿಂಸೆಯನ್ನು ಅನುಭವಿಸುವಂತೆ ಮಾಡಿ, ನನ್ನನ್ನು ನಿನ್ನ ಪಾದಪದ್ಮಗಳನ್ನು ಹೊಂದದಂತೆ ದೂರದಲ್ಲಿ ಸಂಸಾರ ದಲ್ಲಿಟ್ಟು ಕ್ಲೇಶಪಡಿಸಬೇಕೆಂದು ಆಲೋಚಿಸುತ್ತೀಯೆ - (ಇದು ನ್ಯಾಯವೋ ? ನೋಡು--- ಎಂದು ಭಾವವು.)

(೭) ಎನ್ನೈ ಯಾಳುಮ್ ವಲ್‌ಕೋ ವೋರೈನ್ದಿವೈ
ಪೆಯರ್‌ದಿರಾಪ್ಪಕಲ್ ಮೋದುವಿತ್ತಿಟ್ಟು,
ಉನ್ನೈ ನಾನಣುಕಾವಕೈ ಶೆಯ್‌ದುಪ್ಪೋದಿ ಕಣ್ಡಾಯ್,
ಕನ್ನಲೇ ಯಮುದೇ ಕಾರ್ಮುಗಿಲ್‌ವಣ್ಣನೇ
ಕಡಲ್‌ಞಾಲಮ್ ಕಾಕ್ಕಿನ್ನ,
ಮಿನ್ನುನೇಮಿಯಿನಾಯ್ ವಿನೈಯೇನುಡೈ ವೇದಿಯನೇ.

ಪ್ರ॥ ಕನ್ನಲೇ-ಸಕ್ಕರೆಯಂತೆ ಭೋಗ್ಯತಮನಾದವನೇ, ಅಮುದೇ-ಅಮೃತಪ್ರಾಯನೇ, ಕಾರ್ಮುಗಿಲ್‌ವಣ್ಣನೇ-ನೀಲಮೇಘವರ್ಣನೇ, ಕಡಲ್-ಸಮುದ್ರಪರಿವೃತವಾದ, ಞಾಲಮ್-ಭೂಮಿಯನ್ನು, ಕಾಕ್ಕಿನ್ನ-ಕಾಯುವ (ರಕ್ಷಿಸುವ), ಮಿನ್ನು ನೇಮಿಯಿನಾಯ್-ಉಜ್ಜ್ವಲವಾದ ಚಕ್ರವುಳ್ಳವನೇ, ವಿನೈಯೇನುಡೈ-ಪಾಪಿಯಾದ ನನಗೂ ಕೂಡ ಶ್ರವಣಾರ್ಹನಾದ, ವೇದಿಯನೇ-ವೇದಪ್ರತಿಪಾದ್ಯನೇ, ಎನ್ನೈ ಆಳುಮ್-ನನ್ನನ್ನು ಆಳುವ, ವಲ್‌ಕೋ-ಬಲಿಷ್ಠವಾಗಿಯೂ ಸ್ವತನ್ತ್ರವಾಗಿಯೂ ಇರುವ, ಓರ್ ಐನ್ದಿವೈ - ಅದ್ವಿತೀಯವಾದ ಈ ಪಞ್ಚೇನ್ದ್ರಿಯಗಳನ್ನು, ಪೆಯರ್ದು-ನನಗೆ ಬಾಧಕವಾಗಿ ಮಾಡಿಟ್ಟು, ಇರಾಪ್ಪಕಲ್-ರಾತ್ರಿಯೂ ಹಗಲೂ, ಮೋದುವಿತ್ತಿಟ್ಟು-ಪೀಡಿಸಿ, ಉನ್ನೈ-ನಿನ್ನನ್ನು, ನಾನ್-ನಾನು, ಅಣುಕಾವಕೈ-ಸಮೀಪಿಸಲಾರದಂತೆ, ಶೆಯ್ದು-ಮಾಡಿ, ಪೋದಿಕಣ್ಡಾಯ್ - ಹೋಗಿ ಮರೆಸಿಕೊಳ್ಳುತ್ತೀಯೋ ?

( ಸ-ಗಾ-ರ ॥ )—

ಮಾಧುರ್ಯಾದ್ಯಮೃತಾಮ್ಬುಧೇ! ಜಲನಿಧಿ-ಕ್ಷ್ಮಾ-ಪಾಲಕ ! ಶ್ರೀಹರೇ !
ನೀಲಾಮ್ಭೋದನಿಭ ! ಶ್ರುತೀರಿತಗುಣ ! ಶ್ರೀಚಕ್ರಪಾಣೇ ! ವಿಭೋ! ।
ಮಾಂ ಪಾಪಾಶ್ರಯಮತ್ರ ಘೋರವಿಷರತ್ಪಞ್ಚೇನ್ದ್ರಿಯಾಣಾಂ ವಶಂ
ಕೃತ್ವಾ ಹನ್ತ ! ದಿವಾನಿಶಂ ಚ ತುದಸಿ ! ತ್ವತ್ಸಙ್ಗನಂ ನಾಕಸೋಃ ॥

ತಾ॥ ಸಕ್ಕರೆಯಂತೆ ಭೋಗ್ಯತಮನಾಗಿಯೂ, ಅಮೃತಪ್ರಾಯನಾಗಿಯೂ, ನೀಲಮೇಘಶ್ಯಾಮನಾಗಿಯೂ, ಸರ್ವಜಗದ್ರಕ್ಷಕನಾಗಿಯೂ, ಚಕ್ರಪಾಣಿಯಾಗಿಯೂ, ವೇದವೇದ್ಯನಾಗಿಯೂ ಇರುವ ನನ್ನ ಸ್ವಾಮಿಯೇ ! ನನ್ನನ್ನು ವಶೀಕರಿಸಿರುವ ಬಲಿಷ್ಠವಾದ ಈ ಪಞ್ಚೇನ್ದ್ರಿಯಗಳಿಂದ ನನ್ನನ್ನು ರಾತ್ರಿಯೂ ಹಗಲೂ ಪೀಡಿಸಿ, ನಿನ್ನನ್ನು ನಾನು ಸಮೀಪಿಸಿ ಆಶ್ರಯಿಸಲಾರದಂತೆ ಮಾಡಿಬಿಟ್ಟು, ಎಲ್ಲೋ ಹೋಗಿ ಮರೆಸಿಕೊಳ್ಳುತ್ತೀಯೋ ? (ಇದು ನ್ಯಾಯವೋ ?—ಎಂದು ಭಾವವು.)

(೩) ವೇದಿಯಾನಿಱ್ಕುಮೈವರಾಲ್ ವಿನೈಯೇನೈ
ಮೋದುವಿತ್ತು, ಉನ್ ತಿರುವಡಿ
ಶಾದಿಯಾವಕೈ ನೀ ತಡುತ್ತೆನ್ ಪೆಱುದಿಯನ್ನೋ,
ಆದಿಯಾಕಿಯಕಲಿಡಮ್ ಪಡೈತ್ತುಣ್ಡುಮಿೞ್ನ್ದು
ಕಡನ್ದಿಡನ್ದಿಟ್ಟ,
ಶೋದಿ ನೀಣ್ಮುಡಿಯಾಯ್ ತೊೞುಮ್ಬನೇನ್ ಮದುಶೂದನನೇ.

ಪ್ರ॥ ಆದಿಯಾಕಿ – ಕಾರಣಭೂತನಾಗಿ, ಅಕಲ್ – ಅತಿ ವಿಸ್ತೀರ್ಣವಾದ, ಇಡಮ್–ಪ್ರಪಂಚವನ್ನು, ಪಡೈತ್ತು–ಸೃಷ್ಟಿಸಿ, ಉಣ್ಡು–(ಪ್ರಳಯದಲ್ಲಿ) ಭಕ್ಷಿಸಿ, ಉಮಿೞ್ನ್ದು–(ಅನನ್ತರ) ತನ್ನ ಉದರದಿಂದ ಹೊರಡಿಸಿ, ಕಡನ್ದು–(ತ್ರಿವಿಕ್ರಮನಾಗಿ) ಅಳೆದು, ಇಡನ್ದಿಟ್ಟ – (ನೈಮಿತ್ತಿಕ ಪ್ರಳಯದಲ್ಲಿ) ವರಾಹರೂಪಿಯಾಗಿ ಉದ್ಧರಿಸಿದ, ಶೋದಿ–ಜ್ಯೋತಿರ್ಮಯವಾದ, ನೀಣ್ಮುಡಿಯಾಯ್–ಉನ್ನತವಾದ ಕಿರೀಟವನ್ನು ಧರಿಸಿರುವವನೇ, ತೊೞುಮ್ಬನೇನ್–ದಾಸಭೂತನಾದ ನನಗೆ, ಮದುಶೂದನನೇ–ಶತ್ರುನಾಶಕನಾದ ಮಧುಸೂದನನೇ, ವೇದಿಯಾನಿಱ್ಕುಮ್–ಹಿಂಸಿಸುವ ಸ್ವಭಾವವುಳ್ಳ, ಐವರಾಲ್–ಪಞ್ಚೇನ್ದ್ರಿಯಗಳಿಂದ, ವಿನೈಯೇನೈ–ಪಾಪಿಯಾದ ನನ್ನನ್ನು, ಮೋದುವಿತ್ತು–ಕ್ಲೇಶಪಡಿಸಿ, ಉನ್–(ಸರ್ವರಕ್ಷಕನಾದ) ನಿನ್ನ, ತಿರುವಡಿ–ಪಾದಗಳನ್ನು, ಶಾದಿಯಾವಕೈ–ಹೊಂದದೆ ಇರುವಂತೆ, ನೀ–ನೀನು, ತಡುತ್ತು–(ನನ್ನನ್ನು) ತಡೆದು ಇಟ್ಟು, ಎನ್ ಪೆಱುದಿ–ಏನು ಫಲವನ್ನು ಪಡೆದಿರುತ್ತೀಯೆ? ಅನ್ನೋ–ಅಯ್ಯೋ!

( ಸಂಗ್ರಹ ॥ )—

ವಿಸ್ತೀರ್ಣಾಂ ಪೃಥಿವೀಮಿಮಾಂ ಕಿಲ ಸೃಜನ್ ಮೂಲಾತ್ಮಕಸ್ತ್ವಂ ಹರೇ!
ಭಕ್ಷಿತ್ವಾ ಪುನರುದ್ಗಿರನ್ನಪಿ ಪದೇನಾಕ್ರಮ್ಯ ಚೋದ್ಧೃತ್ಯ ಚ ।
ಜ್ಯೋತಿಷ್ಮನ್ಮಕುಟೋಜ್ಜ್ವಲ ! ತ್ವಮಿಹ ಮಾಂ ಪಞ್ಚೇನ್ದ್ರಿಯೈಃ ಪೀಡಿತಂ
ಕುರ್ವನ್ ಕಿಂ ಮಧುಸೂದನಾದ್ಯ ಭಜಸೇ! ಹಾ ! ತ್ವತ್ಪದಾದ್ದೂರಗಮ್ ॥

ತಾ॥ ಜಗತ್ಕಾರಣಭೂತನಾಗಿ ವಿಸ್ತೀರ್ಣವಾದ ಈ ಪ್ರಪಞ್ಚವನ್ನೆಲ್ಲಾ ಸೃಷ್ಟಿಮಾಡಿ (ಪ್ರಳಯದಲ್ಲಿ) ಭಕ್ಷಿಸಿ, ಅನನ್ತರ ಪುನಃ ಸೃಷ್ಟಿಸಿ, (ತ್ರಿವಿಕ್ರಮನಾಗಿ) ಅಳೆದು, (ವರಾಹರೂಪಿಯಾಗಿ) ಉದ್ಧರಿಸಿ, ಜ್ಯೋತಿರ್ಮಯವಾದ ಉನ್ನತ ಕಿರೀಟವನ್ನು ಧರಿಸಿರುವವನೇ! ನನ್ನ ಮಧುಸೂದನನೇ! ಪಞ್ಚೇನ್ದ್ರಿಯಗಳಿಂದ

ನನ್ನನ್ನು ಕ್ಲೇಶಪಡಿಸಿ, ನಾನು ನಿನ್ನನ್ನು ಹೊಂದದೆ ಇರುವಂತೆ ತಡೆದು ಇಟ್ಟು, ಏನು ಫಲವನ್ನು ಪಡೆದಿರುತ್ತೀಯೆ? ಅಯ್ಯೋ! (ರಕ್ಷಕನಾದ ನೀನು ಹೀಗೆ ಮಾಡಬಹುದೆ?)

(೪) ಶೂದು ನಾನಱಿಯಾವಕೈ ಶುೞಱ್ಱಿಯೋರೈವರೈಕ್ಕಾಟ್ಟಿ,
ಉನ್ನಡಿ
ಪ್ಪೋದು ನಾನಣುಕಾವಕೈ ಶೆಯ್ದು ಪೋದಿ ಕಣ್ಡಾಯ್,
ಯಾದುಮ್ ಯಾವರುಮಿನ್ಱಿ ನಿನ್ನಕಮ್ಬಾಲೊಡುಕ್ಕಿ
ಯೋರಾಲಿನೀಳಿಲೈ,
ಮೀದು ಶೇರ್ ಕುೞವಿ ವಿನೈಯೇನ್ ವಿನೈತೀರ್ ಮರುನ್ದೇ.

ಪ್ರ॥ ಯಾದುಮ್ – ಸಕಲವಿಧವಾದ ಅಚೇತನ ವಸ್ತುಗಳನ್ನೂ, ಯಾವರುಮ್–ಸಕಲ ಚೇತನರನ್ನೂ, ಇನ್ಱಿ–ಒಂದನ್ನೂ ಬಿಡದೆ, ನಿನ್ ಅಕಮ್ಬಾಲ್–ನಿನ್ನ ಉದರದಲ್ಲಿ, ಒಡುಕ್ಕಿ–ಅಡಗಿಸಿಕೊಂಡು, ಓರ್ ಆಲಿನೀಳಿಲೈಮೀದು–ಒಂದು ಉದ್ದವಾದ ಆಲದ ಎಲೆಯಮೇಲೆ, ಶೇರ್–ಸೇರಿ ಶಯನಮಾಡುವ, ಕುೞವಿ–ಶಿಶುವಾದವನೇ, ವಿನೈಯೇನ್–ಪಾಪಿಯಾದ ನನ್ನ, ವಿನೈತೀರ್–ಪಾಪನಾಶಕವಾದ, ಮರುನ್ದೇ – ದಿವ್ಯೌಷಧರೂಪಿಯಾದವನೇ, ಓರ್ ಐವರೈ–ಅದ್ವಿತೀಯ ಬಲವುಳ್ಳ ಪಞ್ಚೇನ್ದ್ರಿಯಗಳನ್ನು, ಕಾಟ್ಟಿ–ತೋರಿಸಿ, ಶೂದು–(ನಿನ್ನ) ಮಾಯಾತನ್ತ್ರವನ್ನು, ನಾನ್ ಅಱಿಯಾವಕೈ–ನಾನು ತಿಳಿಯದಂತೆ, ಶುೞಱ್ಱಿ–ವಿಷಯಗಳಲ್ಲಿ ಮಗ್ನನಾಗುವಂತೆ ಮಾಡಿ, ಉನ್ ಅಡಿಪ್ಪೋದು – ನಿನ್ನ ಪಾದಾರವಿನ್ದಗಳನ್ನು, ನಾನ್ ಅಣುಕಾವಕೈ–ನಾನು ಆಶ್ರಯಿಸದೆ ಇರುವಂತೆ, ಶೆಯ್ದು ಪೋದಿ ಕಣ್ಡಾಯ್–ಮಾಡಿ ಹೋಗಿ ಮರೆಸಿಕೊಳ್ಳುತ್ತೀಯೆ.

( ಸ–ಗಾ–ರ ॥ )—

ಸರ್ವಾಚೇತನಚೇತನಾವಳಿಮಪಿ ತ್ವಯ್ಯೇವ ಕೃತ್ವಾ ಸ್ವಯಂ
ಬಾಲಸ್ತ್ವಂ ವಟಪತ್ರಶಾಯ್ಯಹಹ ! ಮೇ ಪಾಪಸ್ಯ ದಿವ್ಯೌಷಧ ।
ದುಷ್ಪಞ್ಚೇನ್ದ್ರಿಯವಶ್ಯಮೇವ ಕಿಲ ಮಾಂ ಕೃತ್ವಾ ಭ್ರಮಾನ್ಧಂ ಭುವಿ
ತ್ವತ್ಪಾದಾಮ್ಬುಜಸಂಶ್ರಯಾದ್ವಿರಹಿತಂ ತ್ಯಕ್ತ್ವಾಽಸಿ ದೂರಂ ಗತಃ ॥

ತಾ॥ ಸಕಲ ಚೇತನಾಚೇತನಗಳನ್ನೂ ನಿನ್ನ ಉದರದಲ್ಲಿಟ್ಟುಕೊಂಡು ಒಂದು ಆಲದ ಎಲೆಯಮೇಲೆ ಶಿಶುರೂಪಿಯಾಗಿ ಶಯನಮಾಡುವವನೇ! ಪಾಪಿಯಾದ ನನ್ನ ಪಾಪವನ್ನೆಲ್ಲಾ ನಾಶಮಾಡುವ ದಿವ್ಯೌಷಧರೂಪಿಯಾದವನೇ! ಪಞ್ಚೇನ್ದ್ರಿಯಗಳನ್ನು ನನಗೆ ತೋರಿಸಿ ನಿನ್ನ ಮಾಯಾತನ್ತ್ರದಿಂದ ನಾನು ವಿಷಯಾಮ್ಬುಧಿ ಮಗ್ನನಾಗುವಂತೆ ಮಾಡಿ, ನಿನ್ನ ಪಾದಾರವಿನ್ದಗಳನ್ನು ನಾನು ಹೊಂದದಂತೆ ಮಾಡಿಬಿಟ್ಟು, ಹೋಗಿ ಮರೆಸಿಕೊಳ್ಳುತ್ತೀಯೆ—ಇದು ನ್ಯಾಯವೇ !

(೫) ತೀರ್ಮರುನ್ದಿನ್ಱಿ ಯೈನ್ದುನೋಯಡುಮ್
ಶೆಕ್ಕಿಲಿಟ್ಟು ತ್ತಿರಿಕ್ಕುಮೈವರೈ,
ನೇರ್ ಮರುಙ್ಗುಡೈತ್ತಾ ವಡೈತ್ತು ನೆಕಿೞ್ಪ್ಪಾನೊಕ್ಕಿನ್ಱಾಯ್,
ಆರ್ಮರುನ್ದಿನಿ ಯಾಕುವಾರಡಲಾೞಿಯೇನ್ದಿ
ಯಶುರರ್ವನ್ಕುಲಮ್,
ವೇರ್ಮರುಙ್ಗಱುತ್ತಾಯ್ ವಿಣ್ಣಾಳೀರ್
ಪೆರುಮಾನೇಯೋ.

ಪ್ರ॥ ಅಡಲ್ – ಶತ್ರುಧ್ವಂಸಕವಾದ, ಆೞಿ–ಚಕ್ರವನ್ನು, ಏನ್ದಿ–ಧರಿಸಿಕೊಂಡು, ಅಶುರರ್ವನ್ಕುಲಮ್ – ರಾಕ್ಷಸರ ಪ್ರಬಲವಾದ ಸಮೂಹವನ್ನು, ಮರುಙ್ಗುವೇರ್ – ಪಕ್ಕದ ಬೇರಿನೊಡನೆ (ಸಮೂಲವಾಗಿ), ಅಱುತ್ತಾಯ್–ಛೇದಿಸಿದವನೇ, ವಿಣ್ಣಾಳೀರ್ ಪೆರುಮಾನೇ–ಪರಮಪದವಾಸಿಗಳಾದ ನಿತ್ಯಸೂರಿಗಳಿಗೆ ಸ್ವಾಮಿಯೇ, ತೀರ್ಮರುನ್ದು ಇನ್ಱಿ– ಶಾನ್ತಿಕರವಾದ ಔಷಧವಿಲ್ಲದಂತೆ, ಐನ್ದುನೋಯ್ ಅಡುಮ್–ಐದು ವಿಧವಾದ (ಶಬ್ದಾದಿವಿಷಯಗಳೆಂಬ) ನೋವುಗಳನ್ನು ಉಂಟುಮಾಡುವ, ಶೆಕ್ಕಿಲ್–ಶರೀರವೆಂಬ ಗಾಣದಲ್ಲಿ, ಇಟ್ಟು–ಮಡಗಿ, ತಿರಿಕ್ಕುಮ್–ತಿರುಗಿಸುವ (ಭ್ರಮಿಸುವಂತೆ ಮಾಡುವ), ಐವರೈ–ಪಂಚೇನ್ದ್ರಿಯಗಳನ್ನು, ನೇರ್ಮರುಙ್ಗು–ಎದುರಿನಲ್ಲೂ ಪಕ್ಕದಲ್ಲೂ, ಉಡೈತ್ತಾ–ಹೊಂದಿರುವಂತೆ, ಅಡೈತ್ತು–ನಿಲ್ಲಿಸಿ, ನೆಕಿೞ್ಪ್ಪಾನ್ ಒಕ್ಕಿನ್ಱಾಯ್ – ಕೈಬಿಡುವಂತೆ ಕಾಣುತ್ತೀಯೆ. ಇನಿ–ಇನ್ನುಮೇಲೆ, ಮರುನ್ದು ಆಕುವಾರ್ – ಇದಕ್ಕೆ ಔಷಧ (ಪರಿಹಾರಕ) ಆಗುವವರು, ಆರ್–ಯಾರು ?

( ಸ-ಗಾ-೮ || ) —

ಚಕ್ರಂ ತೇ ಕರತೋ ವಹನ್ನಸುರನಿರ್ಮೂಲಪ್ರಣಾಶಂ ಹರೇ !
ಕೃತ್ವಾ ಸೂರಿಕುಲಾಧಿಪೋಽಸಿ ಭಗವನ್ ! ಮೇ ಪಞ್ಚ ಶಬ್ದಾದಿಭಿಃ |
ಬನ್ಧಂ ದುರ್ವಿಷಯೈಃ ಪ್ರಕಲ್ಪ್ಯ ಪರಿತಃ ಪಞ್ಚೇನ್ದ್ರಿಯೈರ್ಮಾಂ
ತುದನ್
ಕಿಂ ದೂರೀಕುರುಷೇ ಯುಜೋ ಮಮ ಮಹಾದಿವ್ಯೌಷಧಾತ್ಮಾಽದ್ಯ ಕಃ?||

ತಾ|| ಚಕ್ರಧರನಾಗಿ ರಾಕ್ಷಸಕುಲವನ್ನೆಲ್ಲಾ ಸಮೂಲವಾಗಿ ಛೇದಿಸಿದವನೇ ! ನಿತ್ಯಸೂರೀಶ್ವರನೇ ! ಐದುವಿಧ (ಶಬ್ದಾದಿ ವಿಷಯಗಳೆಂಬ) ಅಪರಿಹಾರ್ಯವಾದ ನೋವುಗಳನ್ನು ಉಂಟುಮಾಡುವ ಶರೀರವೆಂಬ ಗಾಣದಲ್ಲಿ ಇಟ್ಟು ತಿರುಗಿಸುವ ಪಂಚೇನ್ದ್ರಿಯಗಳನ್ನು ನಮಗೆ ಸುತ್ತಲೂ ಇಟ್ಟು ನಮ್ಮನ್ನು ನೀನು ಕೈಬಿಡುವಂತೆ ಕಾಣುತ್ತೀಯೆ. ಹೀಗಾದಮೇಲೆ ಅದಕ್ಕೆ ಪರಿಹಾರಕರು ಯಾರು ? (ಹೀಗಾದರೆ ನಮಗೆ ಯಾರು ರಕ್ಷಕರು ?)

(೭) ವಿಣ್ಣುಳಾರ್ ಪೆರುಮಾರ್ಕ್ಕಡಿಮೈಶೆಯ್ವಾರೈಯುಮ್
ಶೆಱುಮ್ ಐಮ್ಪುಲನಿವೈ,
ಮಣ್ಣುಳೆನ್ನೈಪ್ ಪೆಱ್ಱಾಲ್ ಎನ್ ಶೆಯ್ಯಾ ಮಱ್ಱು
ನೀಯುಮ್ ವಿಟ್ಟಾಲ್,
ಪಣ್ಣುಳಾಯ್ ಕವಿತನ್ನುಳಾಯ್ ಪತ್ತಿಯಿನುಳ್ಳಾಯ್
ಪರಮಮೂರ್ತೀ, ವನ್ದೆನ್
ಕಣ್ಣುಳಾಯ್ ನೆಞ್ಜುಳಾಯ್ ಶೊಲ್ಲುಳಾಯೊನ್ಱು
ಶೊಲ್ಲಾಯೇ.

ಪ್ರ|| ವಿಣ್ಣುಳಾರ್-ಪರಮಪದವಾಸಿಗಳಾದ, ಪೆರುಮಾಱ್ಕು-ಸರ್ವೇಶ್ವರನಾದ ನಿನಗೆ, ಅಡಿಮೈಶೆಯ್ವಾರೈಯುಮ್ — ಕೈಂಕರ್ಯಮಾಡುವ ನಿತ್ಯಸೂರಿಗಳನ್ನೂ, ಮಣ್ಣುಳ್ — ಈ ಭೂಲೋಕದಲ್ಲಿ, ಶೆಱುಮ್ - ಪೀಡಿಸುವ, ಇವೈ ಐಮ್ಪುಲನ್ — ಈ ಐದು ಇನ್ದ್ರಿಯಗಳೂ, ಎನ್ನೈ --(ಅಶಕ್ತನಾದ) ನನ್ನನ್ನು, ಪೆಱ್ಱಾಲ್-ಹೊಂದಿದರೆ, ಮಱ್ಱು-ಅದಕ್ಕೆಮೇಲೆ, ನೀಯುಮ್-ನಿಯಾಮಕನಾದ ನೀನೂ, ವಿಟ್ಟಾಲ್-ಕೈಬಿಟ್ಟರೆ, ಎನ್ ಶೆಯ್ಯಾ-ಅವುಗಳು ಏನುಮಾಡಲಾರವು, ಎನ್-ಹೀಗೆ ನೊರೆಯಿಡುವ ನನ್ನ, ಪಣ್-ದೀನಸ್ವರಕ್ಕೆ, ಉಳಾಯ್-ವಶ್ಯನಾಗಿ,

ಕವಿತನ್ನುಳಾಯ್-ಕವಿಗಳ ಕವಿತ್ವಕ್ಕೆ ಪ್ರತಿಪಾದ್ಯನಾಗಿ, ಪತ್ತಿಯಿನುಳ್ಳಾಯ್-ಭಕ್ತಿಗೆ ವಿಷಯಭೂತನಾಗಿ, ಪರಮಿಾಶನೇ - ಸರ್ವೇಶ್ವರನಾಗಿರುವವನೇ, ಎನ್-ನನ್ನ, ಕಣ್ಣುಳಾಯ್ - ಕಣ್ಣಿನೊಡನೆ ಇರುವವನೂ, ನೆಞ್ಜುಳಾಯ್-ಮನಸ್ಸಿನೊಡನೆ ಇರುವವನೂ, ಸೊಲ್ ಉಳಾಯ್-ವಾಕ್ಕಿನೊಡನೆ ಇರುವವನೂ ಆದ ನೀನು, ವನ್ದು-ಬಂದು, ಒನ್ಱು ಸೊಲ್ಲಾಯೇ-ಒಂದು ಮಾತನ್ನು ಹೇಳು.

( ಸ-ಗಾ-ರ || )—

ಭೂಮವ್ಯಾಮತ್ರ ಹಿ ನಿತ್ಯಸೂರಿಸಿಪದಹಾನಪ್ಯೇವಮೇತಾನ್ಯಹೋ !
ಹಾ! ಹಾ! ಹನ್ತ! ತುದನ್ತಿ ಮಾಂ ಚ ಬಹುಧಾ ಪಞ್ಚೇನ್ದ್ರಿಯಾಣಿ
ಸ್ವಯಮ್ |
ಕಿಂ ನ್ವೈತಾನಿ ನ ಕುರ್ವತೇ ? ವದ! ಭವಾನೇವಂ ತ್ಯಜೇನ್ಮಾಂ ಚ ಚೇ-
ನ್ನಾದೇ ಮೇ ಕವಿತಾಸು ಭಕ್ತಿನಯನಸ್ವಾನ್ತೋಕ್ತಿಷು ಭ್ರಾಜಸೇ ||

ತಾ|| "ನಿತ್ಯಸೂರಿಗಳನ್ನೂ ಕೂಡ ಈ ಭೂಲೋಕದಲ್ಲಿ ಬಂದಾಗ ಪೀಡಿಸುವ ಸ್ವಭಾವವುಳ್ಳ ಈ ಪಞ್ಚೇನ್ದ್ರಿಯಗಳೂ ಅಶಕ್ತನಾದ ನನ್ನನ್ನು ಪೀಡಿಸುವುದಕ್ಕೆ ಆರಂಭಿಸಿದರೆ, ನೀನೂ ನನ್ನನ್ನು ಕೈಬಿಟ್ಟರೆ, ಅವುಗಳು ನನ್ನನ್ನು ಏನು ಮಾಡಲಾರವು ?"—ಎಂದು ಮೊರೆಯಿಡುವ ನನ್ನ ಸ್ವರದಲ್ಲೂ ಕವಿತ್ವದಲ್ಲೂ ಭಕ್ತಿಯಲ್ಲೂ ಇರುವ ಸರ್ವೇಶ್ವರನೇ ! ನನ್ನ ಕಣ್ಣಿನಲ್ಲೂ ಮನಸ್ಸಿನಲ್ಲೂ ವಾಕ್ಕಿನಲ್ಲೂ ಇರುವ ನೀನು ನನ್ನ ಎದುರಿಗೆ ಬಂದು (ನನ್ನ ಸನ್ತಾಪವು ತೀರುವಂತೆ) ಒಂದು ಮಾತನ್ನು ಹೇಳಬಾರದೇ ?—

(೭) ಒನ್ಱುಸೊಲ್ಲಿ ಒರುತ್ತಿನಿಲ್ ನಿಱ್ಕಿಲಾದ ವೋರೈವರ್
ವನ್ಗಯವರೈ,
ಎನ್ಱು ಯಾನ್ ವೆಲ್ಗಿಱ್ಪನ್ ತಿರುವರುಳಿಲ್ಲೈಯೇಲ್,
ಅನ್ಱು ತೇವರಸುರರ್ ವಾಙ್ಗ ಅಲೈಕಡಲರವಮಳಾವಿ, ಓರ್
ಕುನ್ಱಮ್ ವೈತ್ತವೆನ್ದಾಯ್ ಕೊಡಿಯೇನ್ ಪರುಗಿನ್ನಮುದೇ

ಪ್ರ|| ಅನ್ಱು-ಆ ಕಾಲದಲ್ಲಿ, ತೇವರ್-ದೇವತೆಗಳೂ, ಅಸುರರ್-ರಾಕ್ಷಸರೂ, ವಾಙ್ಗ-ಪ್ರಬಲವಾಗಿ ಶ್ರಮಪಡುವಂತೆ ನಿಂತಾಗ, ಅಲೈಕಡಲ್-ಅಲೆಗಳೊಡನೆ ಕೂಡಿದ ಸಮುದ್ರದಲ್ಲಿ, ಅರವಮ್-ವಾಸುಕಿಯೆಂಬ ಸರ್ಪವನ್ನು, ಅಳಾವಿ-ಸುತ್ತಿ ಓರ್ ಕುನ್ಱಮ್-ಒಂದು (ಅದ್ವಿತೀಯವಾದ) ಮನ್ದರಪರ್ವತವನ್ನು, ವೈತ್ತ-ಸ್ಥಿರ

ವಾಗಿ ನಿಲ್ಲಿಸಿದ, ಎನಾನ್ಱಯ್–ನನ್ನ ಸ್ವಾಮಿಯೇ, ಕೊಡಿಯೇಱ–ಕ್ರೂರಹೃದಯ ನಾದ ನಾನು, ಪರುಕು–ಪಾನಮಾಡುವುದಕ್ಕೆ ಯೋಗ್ಯವಾದ, ಈ ಅಮುದೇ–ಭೋಗ್ಯವಾದ ಅಮೃತವೇ, ಉನ್ ತಿರುವರುಳ್–ನಿನ್ನ ದಯೆಯು, ಇಲ್ಲೈಯೇಲ್–ಇಲ್ಲದಿದ್ದರೆ, ಒನ್ಱು ಶೊಲ್ಲಿ–ಒಂದನ್ನು ಅಪೇಕ್ಷಿಸಿ ಕೇಳಿ, ಒರುತ್ತಿನಿಲ್–ಏಕಸ್ಥಿತಿಯಲ್ಲಿ, ನಿಱ್ಕಿಲಾದ–ನಿಲ್ಲದ, ಓರ್–ಸ್ವತನ್ತ್ರವಾದ, ಐವರ್–ಪಂಚೇನ್ದ್ರಿಯಗಳೆಂಬ, ವಲ್ ಕಯವರ್ರೈ – ಪ್ರಬಲರಾದ ನೀಚರನ್ನು, ಯಾನ್–ನಾನು, ಎನ್ಱು ಯಾವಾಗ, ವೆಲ್ ಕಿಱ್ಪನ್–ಗೆಲ್ಲಬಲ್ಲೆನು.

( ಸ–ಗಾ–ರ || )—

ದೇವೈಶ್ಶಾಪ್ಯಸುರೈಸ್ಸಹಾಮ್ಬುಧಿತಲೇ ಸರ್ಪಾವೃತಂ ಭೂಧರಂ
ಕೃತ್ವಾ ಮನ್ಥನಕೃತ್ಪ್ರಭೋ! ಮಮ ಹರೇ! ದಿವ್ಯಾಮೃತಾತ್ಮಾ ಭವಾನ್ |
ಕಾರುಣ್ಯಸ್ತು ವಿನಾ ತವಾತ್ರ ಚಪಲೈಃ ಕ್ಷುದ್ರೈಶ್ಚ ಪಞ್ಚೇನ್ದ್ರಿಯೈ–
ರ್ನಿತ್ಯಂ ಪೀಡಿತ ಏವ ತಾನಿ ಚ ಕದಾ ಜೇತುಂ ಪ್ರಭುಸ್ಸ್ಯಾಮಹಮ್?||

ತಾ|| ಆ ಕಾಲದಲ್ಲಿ ದೇವತೆಗಳೂ ರಾಕ್ಷಸರೂ ಸಮುದ್ರಮಥನಕ್ಕೆ ಉಪಕ್ರಮಿಸಿದಾಗ ವಾಸುಕಿಯೆಂಬ ಸರ್ಪವನ್ನು ಸುತ್ತಿ ಮನ್ದರಪರ್ವತವನ್ನು ಸ್ಥಿರವಾಗಿ ನಿಲ್ಲಿಸಿದ ನನ್ನ ಸ್ವಾಮಿಯೇ! ನನ್ನ ಅಮೃತಸ್ವರೂಪನೇ! ನಿನ್ನ ದಯೆಯು ಇಲ್ಲದಿದ್ದರೆ ಅತಿಚಪಲವಾದ ಈ ಪಂಚೇನ್ದ್ರಿಯಗಳೆಂಬ ನೀಚಶತ್ರುಗಳನ್ನು ನಾನು ಎಂದಿಗೆ ಗೆಲ್ಲಬಲ್ಲೆನು?

(೮) ಇನ್ನಮುಂದೆನತ್ತೋಱ್ಱಿ ಯೋರ್ರೈವರ್ ಯಾವರ್ರೈಯುಮ್
ಮಯಕ್ಕ, ನೀ ವೈತ್ತ,
ಮುನ್ನಮಾಯಮೆಲ್ಲಾಮ್ ಮುೞುವೇರರಿನ್ದು
ಎನ್ನುಳ್ ಉಱ,
ತಿನ್ನಮುಮ್ ತಿರುಮೂರ್ತ್ತಿಯುಮ್ ತಿನ್ದಿತ್ತೋರ್ತ್ತಿ
ಕ್ಕೃತ್ತೊೞುವೇ ಯರುಳೆನಕ್ಕು,
ಎನ್ನಮ್ಮಾ! ಎನ್ ಕಣ್ಣಾ! ಇಮೈಯೋರ್ತಮ್
ಕುಲಮುದಲೇ.

ಪ್ರ|| ಎನ್ ಅಮ್ಮಾ– ನನ್ನ ಸ್ವಾಮಿಯೇ! ಎನ್ ಕಣ್ಣಾ–ನನ್ನ (ಸೌಲಭ್ಯವುಳ್ಳ) ಶ್ರೀಕೃಷ್ಣನೇ! ಇಮೈಯೋರ್ ತಮ್ ಕುಲಮುದಲೇ – ನಿತ್ಯಸೂರಿಗಳ ಸಂಘಕ್ಕೆ ಕಾರಣಭೂತನೇ! ಓರ್- ಅದ್ವಿತೀಯವಾದ, ಐವರ್- ಪಂಚೇನ್ದ್ರಿಯ

ಗಳಿಂದ, ಇಱ ಅಮುದಿನ-ಭೋಗ್ಯವಾದ ಅಮೃತನೆಂಬಂತೆ, ತೋಱ್ಱಿ- ತೋರಿ, ಯಾವರ್ಯುಮ್ - (ಬ್ರಹ್ಮಾದಿಗಳಾದ) ಸರ್ವರನ್ನೂ, ಮಯಕ್ಕ - ಮೋಹಿಸು ವಂತೆ ಮಾಡುವ, ನೀ-(ಸರ್ವಶಕ್ತನಾದ) ನೀನು, ವೈತ್ತ-ಉಂಟುಮಾಡಿ ಇರುವ, ಮುನ್ನಮಾಯಮ್ ಎಲ್ಲಾಮ್-ಅನಾದಿ ಮಾಯಾರೂಪವಾದ ವಿಷಯಗಳನ್ನೆಲ್ಲಾ, ಮುಱುವೇರ್ ಅರಿನ್ದು-ಸಮಗ್ರವಾಗಿ ಬೇರಿನೊಡನೆ ಕತ್ತರಿಸಿ, ಎನ್ನೈ (ಸಂಸಾರ ಭೀತನಾದ) ನನ್ನನ್ನು, ಉಱ ಶಿನ್ನಮುಮ್-ನಿನ್ನ (ಶಂಖಚಕ್ರಾದಿ) ಚಿಹ್ನಗಳನ್ನೂ, ತಿರುಮೂರ್ತ್ತಿಯುಮ್ - ದಿವ್ಯಮಂಗಳವಿಗ್ರಹವನ್ನೂ, ಶಿನ್ದಿತ್ತು-(ಮನಸ್ಸಿನಲ್ಲಿ) ಸ್ಮರಿಸಿ, ಏತ್ತಿ-(ವಾಕ್ಕಿನಿಂದ) ಸ್ತುತಿಸಿ, ಕೈತೊೞ-(ಕೈಯಿಂದ) ಸೇವಿಸುವಂತೆ, ಎನಕ್ಕೇ-ನನಗೇ, ಅರುಳ್-ಕೃಪೆಮಾಡು.

( ಶ-ಗಾ-ರ || )—

ಸ್ವಾಮಿನ್! ಮೇ ವರಸೂರಿಮೂಲ! ಭಗವನ್! ಕೃಷ್ಣಾತ್ರ ಪಞ್ಚೇನ್ದ್ರಿಯೈ-
ರ್ದೇವಾನಾಮಪಿ ಮೋಹನೋಽಸಿ! ಮಹತೀಂ ಮಾಯಾಂ ತವೇಮಾಂ ಹರೇ! |
ನಿರ್ಮೂಲ್ಯಾದ್ಯ ತವಾಯುಧಾದಿಸಹಿತಂ ದಿವ್ಯಂ ಶುಭಂ ವಿಗ್ರಹಂ
ಸ್ಮರ್ತುಂ ಸ್ತೋತುಮಿಹಾರ್ಚಿತುಂ ಚ ಕುರು ಮೇ ಶಕ್ತಿಂ ದಯಾವಾರಿಧೇ||

ತಾ|| ನನ್ನ ಸ್ವಾಮಿಯೇ! ನನ್ನ ಕೃಷ್ಣನೇ! ನಿತ್ಯಸೂರಿ ಸಂಘಮೂಲ ಭೂತನೇ! ಪಂಚೇನ್ದ್ರಿಯಗಳಿಂದ (ಬ್ರಹ್ಮಾದಿಗಳಾದ) ಸರ್ವರನ್ನೂ ಮೋಹ ಪಡಿಸುವ ನೀನು ಉಂಟುಮಾಡಿರುವ ಅನಾದಿ ಮಾಯಾರೂಪವಾದ ವಿಷಯಗಳ ನ್ನೆಲ್ಲಾ ಸಮೂಲವಾಗಿ ಛೇದಿಸಿ, (ಸಂಸಾರಭೀತನಾದ) ನಾನು ನಿನ್ನ ಶಂಖ ಚಕ್ರಾದಿ ಚಿಹ್ನಗಳನ್ನೂ ವಿಗ್ರಹಸೌನ್ದರ್ಯವನ್ನೂ (ಮನಸ್ಸಿನಿಂದ) ಸ್ಮರಿಸಿ (ವಾಕ್ಕಿನಿಂದ) ಸ್ತೋತ್ರಮಾಡಿ, (ಕೈಯಿಂದ) ಸೇವೆಮಾಡುವಂತೆ, ನನ್ನಲ್ಲಿ ವಿಶೇಷ ವಾದ ಕೃಪೆಯನ್ನು ಮಾಡು.

(೯) ಕಾಲಮುದಲಡುಪ್ಪಾಯ್ ತಿಣಿನ್ನ ಕೊಳ್ಳುಮವರ್ ಕುೞಯಿನಿಲ್
ಪಿೞಕ್ಕುಮೈವರ್ಕ್ಕೈ,
ವಲಮುದಲ್‌ಕೆಡುಕ್ಕುಮ್ ವರಮೇ ತನ್ದರುಳ್‌ಕಣ್ಣಾಯ್,
ನಿಲಮುದಲಿನಿ ಯೆವ್ವುಲಕುಕ್ಕುಮ್ ನಿಱ್ಪನಶೆಲ್ವನವೆನ,
ಪೊರುಳ್
ಪಲಮುದಲ್ ಪಡೈತ್ತಾಯ್ ಎನ್‌ಕಣ್ಣಾ! ಎನ್‌ಪರಂಶುಡರೇ.

ಪ್ರ|| ನಿಲಮುದಲ್-ಭೂಮಿ ಮೊದಲಾದ, ಇನಿ ಎವ್ವುಲಕುಕ್ಕುಮ್-ಇನ್ನೂ ಎಲ್ಲಾ ಲೋಕಗಳಿಗೂ, ನಿಱ್ಱ ಶೆಲ್ವನೆ ಎನ-ಸ್ಥಿರಚರಗಳೆಂಬ, ಪಲಪೊರುಳ್-ಅನೇಕ ಪದಾರ್ಥಗಳನ್ನೂ, ಮುದಲ್-ಆದಿಕಾಲದಲ್ಲಿ, ಪಡೈತ್ತಾಯ್-ಸೃಷ್ಟಿಸಿದವನೇ!, ಎನ್ ಕಣ್ಣಾ-ನನ್ನ ಕೃಷ್ಣನೇ!, ಎನ್ ಪರಂಶುಡರೇ-ನನ್ನ ಪರಜ್ಯೋತಿಸ್ಸ್ವರೂಪನೇ, ಕುಲಮುದಲ್-ವಂಶವನ್ನು ಮೂಲಕಾರಣದೊಡನೆ, ಅಡುಮ್-ನಾಶಪಡಿಸುವ, ತೀವಿನೈ-ಕ್ರೂರವಾದ ಪಾಪಕರ್ಮಗಳಿಗೆ ಪ್ರವರ್ತಕವಾದ, ಕೊಡುವಲ್-ಅತಿ ಪ್ರಬಲವಾದ, ಕುೞಿಯಿನಿಲ್ – ವಿಷಯಗಳೆಂಬ ಹಳ್ಳಗಳಲ್ಲಿ, ವೀೞ್ಕ್ಕುಮ್-ಬೀಳಿಸುವಂತಹ, ಐವರ್ರೈ-ಪಂಚೇಂದ್ರಿಯಗಳನ್ನು, ವಲಮುದಲ್-ಸ್ವಬಲ ಮೂಲವಾದ ದುರ್ವಾಸನೆಯೊಡನೆ, ಕೆಡುಕ್ಕುಮ್-ನಾಶಪಡಿಸುವ, ವಲಮೇ-ಪ್ರಸಾದಫಲವನ್ನೇ, ತನ್ದರುಳ್ ಕಣ್ಣಾಯ್ – (ನನಗೆ) ಕೃಪೆಯಿಂದ ಕೊಟ್ಟು ಅನುಗ್ರಹಿಸು.

( ಸ-ಗಾ-ರ || )—

ಭೂಮ್ಯಾದೀನಿ ಜಗನ್ತಿ ಸರ್ವಚಿದಚಿದ್ವರ್ಗೈಸ್ಸ್ರಜನ್ ಪ್ರಾಗ್ಭವಾನ್
ಕೃಷ್ಣೋ ಮೇ ಪ್ರಭುರದ್ಯ ಭಾತಿ ಚ ಪರಂ ಜ್ಯೋತಿಸ್ಸ್ವಯಂ ಭಾಸ್ವರಮ್|
ವಂಶೋನ್ಮೂಲನ –ತಾಪಕಾರಣ –ಮಹಾಪಾಪಾವಳೀರ್ವರ್ಧಕೇ
ಗರ್ತೇ ದುರ್ವಿಷಯಾತ್ಮಕೇ ಪತನಕೃತ್ಸಙ್ಘೇನ್ದ್ರಿಯಾತ್ಪಾಹಿ ಮಾಮ್ ||

ತಾ|| ಭೂಲೋಕವೇ ಮೊದಲಾದ ಸಕಲ ಲೋಕಗಳನ್ನೂ ಚರಾಚರ ಸಮಸ್ತ ಪದಾರ್ಥಗಳೊಡನೆ ಆದಿಯಲ್ಲಿ ಸೃಷ್ಟಿಸಿದವನೇ! ನನ್ನ ಶ್ರೀಕೃಷ್ಣನೇ! ನನ್ನ ಪರಜ್ಯೋತಿಸ್ಸ್ವರೂಪನೇ! ಅತಿಕ್ರೂರವಾದ ಪಾಪಕರ್ಮಗಳಿಗೆ ಪ್ರವರ್ತಕವಾದ ಘೋರಕೂಪಗಳಲ್ಲಿ ತಳ್ಳಿ ವಂಶವನ್ನೇ ಸಮೂಲವಾಗಿ ನಾಶಪಡಿಸುವ ಪಂಚೇನ್ದ್ರಿಯಗಳನ್ನು ನಿರ್ಮೂಲಮಾಡುವಂತಹ ಪ್ರಸಾದ ಫಲವನ್ನೇ ನನಗೆ ಅನುಗ್ರಹಿಸು.

(೧೦) ಎನ್ ಪರಂಶುಡರೇ ಯೆನ್ಱುನ್ನೈ ಯಲಱ್ಱಿ
ಯುನ್ನಿಣೈತ್ತಾಮರೈಕಳ್ಕು,
ಅನ್ಬುರುಕಿ ನಿಱ್ಕುಮದು ನಿಱ್ಕ ಚ್ಚುಮಡು ತನ್ದಾಯ್,
ವನ್ಬರಙ್ಗಳೆಡುತ್ತು ಐವರ್ ತಿಶೈತ್ತಿಶೈ ವಲಿತ್ತೆಱ್ಱುಕಿನ್ಱನರ್,
ಮುನ್ ಪರವೈಕಡೈನ್ದಮುದಮ್ ಕೊಣ್ಡ ಮೂರ್ತ್ತಿಯೋ.

ಪ್ರ|| ಮುನ್-ಪೂರ್ವಕಾಲದಲ್ಲಿ, ಪರವೈಕಡೈನ್ದು-ವಿಸ್ತೀರ್ಣವಾದ ಸಮುದ್ರವನ್ನು ಕಡೆದು, ಅಮುದಮ್-ಅಮೃತವನ್ನು, ಕೊಣ್ಡ-ತಂದು (ದೇವತೆಗಳಿಗೆ)

ಉಪಕಾರಮಾಡಿದ, ಮೂರ್ತ್ತಿ – ಸ್ವಾಮಿಯೇ! ಎನ್ – ನನ್ನ, ಪರಂಶುಡರೇ– ಪರಜ್ಯೋತಿರ್ಮಯನೇ, ಎನ್ರು–ಎಂದು, ಉನ್ನೈ–ನಿನ್ನನ್ನು (ನೋಡಿ), ಅಲಱ್ಱಿ– (ಪ್ರೀತಿಯಿಂದ) ಮನಸ್ಸುಬಂದಂತೆ ಕೂಗಿ, ಉನ್ ಇಣೈತ್ತಾಮರೈಕಳ್ಕು – ನಿನ್ನ ಚರಣಾರವಿನ್ದಯುಗಳಕ್ಕೆ, ಅನ್ಬು ಉರುಕಿ – ಪ್ರೇಮದಿಂದ ದ್ರವೀಭೂತನಾಗಿ, ನಿಱ್ಕುಮದು–ನಿಲ್ಲುವ ಆ ಸ್ಥಿತಿಯು, ನಿಱ್ಕ–ಇರುತ್ತಿರಲು, ಶುಮಡು–ಭಾರಸಹವಾದ (ಶರೀರವೆಂಬ) ಪಟ್ಟಡಿಯನ್ನು, ತನ್ದಾಯ್–ಕೊಟ್ಟಿರುತ್ತೀಯೆ! (ಆದುದರಿಂದ) ವೆಮ್ಪರಙ್ಗಳ್–ಪ್ರಬಲವಾದ (ವಿಷಯುಗಳೆಂಬ) ಭಾರಗಳನ್ನು, ಎಡುತ್ತು–ಹೊರಿಸಿ, ಐವರ್ – ಪಂಚೇನ್ದ್ರಿಯಗಳೆಂಬ ಶತ್ರುಗಳು, ತಿಶೈತಿಶೈ – ಎಲ್ಲಾ ಕಡೆಗಳಲ್ಲೂ, ವಲಿಱ್ಱು–ಎಳೆದು, ಎಱ್ಱಾಕಿನ್ನರ್–ಪೀಡಿಸುತ್ತಿದಾರೆ.

(ಸ-ಗಾ-ರ ‖)—

ಪ್ರಾಕ್ ಪಾಥೋನಿಧಿಮನ್ಥನಾದಮೃತಹೃನ್ಮೂರ್ತೇ! ಸುತೇಜೋನಿಧೇ!
ಮೇ ಸ್ವಾಮಿನ್ನಿತಿ ಚ ಸ್ತುವೈಸ್ತವ ಪದಾಮ್ಭೋಜದ್ವಯೇ ಪ್ರೇಮತಃ!
ಚಿತ್ತಂ ಮೇ ದ್ರುತಮಸ್ತು ಯದ್ಯಪಿ! ತಥಾಽಪ್ಯತ್ಯನ್ತಭಾರಾಶ್ರಯಂ
ದೇಹಂ ಮೇ ಕೃತವಾನಸೀಹ! ವಿಷಯಾ ಮಾಂ ಪೀಡಯನ್ತೀನ್ದ್ರಿಯೈಃ‖

ತಾ‖ ಪೂರ್ವಕಾಲದಲ್ಲಿ ಸಮುದ್ರಮಥನವಂಮಾಡಿ ಅಮೃತವನ್ನು ತಂದು ಕೊಟ್ಟ ಸ್ವಾಮಿಯೇ! ನನ್ನ ಪರಜ್ಯೋತಿರ್ಮಯನೇ!— ಎಂದು ನಿನ್ನನ್ನು ಮನಸ್ಸುಬಂದಂತೆ (ಪ್ರೀತಿಯಿಂದ) ಕೂಗಿ, ನಿನ್ನ ಚರಣಾರವಿನ್ದಯುಗಳಕ್ಕೇ ಸೇರುವಂತೆ ದ್ರವೀಭೂತನಾಗಿ ನಿಲ್ಲುವ ಸ್ಥಿತಿಯು ಇರುತ್ತಿರಲು, ಈ ಶರೀರವೆಂಬ ಭಾರಸಹವಾದ ಒಂದು ಪಟ್ಟಡಿಯನ್ನು ಕೊಟ್ಟು ಇರುತ್ತೀಯೆ. ಆದುದರಿಂದ ಪಂಚೇನ್ದ್ರಿಯಗಳೆಂಬ ಶತ್ರುಗಳು ಪ್ರಬಲವಾದ ವಿಷಯುಗಳೆಂಬ ಭಾರಗಳನ್ನು ಹೊರಿಸಿ ಎಲ್ಲಾ ದಿಕ್ಕುಗಳಲ್ಲೂ ಪೀಡಿಸುತ್ತಿದಾರೆ.

(೧೧) ಕೊಣ್ಡಮೂರ್ತ್ತಿಯೋರ್ ಮೂವರಾಯ್ ಕ್ಕುಣಙ್ಗಳ್
ಪಡೈತ್ತಳಿತ್ತು ಕ್ಕೆಡುಕ್ಕುಮ್, ಅ
ಪ್ಪುಣ್ಡರೀಕಕ್ಕೊಪ್ಪೂೞ್ ಪ್ಪುನಲ್ಪಳ್ಳಿ ಯಪ್ಪನುಕ್ಕು,
ತೊಣ್ಡರ್
ತೊಣ್ಡರ್ ತೊಣ್ಡರ್ ತೊಣ್ಡನ್ ಶಡಕೋಪನ್
ಶೊಲ್ಲಾಯಿರತ್ತುಳಿಪ್ಪತ್ತುಮ್,
ಕಣ್ಡುಪಾಡವಲ್ಲಾರ್ ವಿನೈಪೋಮ್ ಕಙ್ಗುಲುಮ್ಪಕಲೇ.

ಪ್ರ|| ಕುಣಙ್ಗಳ್-ರಾಜಸ-ಸಾತ್ತ್ವಿಕ-ತಾಮಸ ಗುಣಗಳನ್ನು, ಕೊಣ್ಡು-ವಹಿಸಿ ಇರುವ, ಮೂರ್ತ್ತಿ-ಬ್ರಹ್ಮ-ವಿಷ್ಣು-ರುದ್ರಮೂರ್ತಿಗಳಾದ, ಓರ್ಮೂವರಾಯ್-ಅದ್ವಿತೀಯರಾದ (ಸೃಷ್ಟಿಸ್ಥಿತಿಲಯಕರ್ತ್ತರು) ಮೂವರೂ ಆಗಿ, ಪಡೈತ್ತು-(ಬ್ರಹ್ಮನಿಗೆ ಅನ್ತರ್ಯಾಮಿಯಾಗಿ) ಸೃಷ್ಟಿಸಿ, ಅಳಿತ್ತು-(ತನ್ನ ಅವತಾರವಾದ ವಿಷ್ಣುರೂಪಿಯಾಗಿ) ರಕ್ಷಿಸಿ, ಕೆಡುಕ್ಕುಮ್-(ರುದ್ರನಿಗೆ ಅನ್ತರ್ಯಾಮಿಯಾಗಿ) ಸಂಹಾರವಮಾಡುವ, ಅ-ಆ (ಪ್ರಸಿದ್ಧವಾದ), ಪುಣ್ಡರೀಕಕ್ಕೊಪ್ಪೂೞ್-ಕಮಲನಾಭಿಯುಳ್ಳ, ಪ್ಪುನಲ್-ಕಾರಣ ಜಲದಲ್ಲಿ, ಪಳ್ಳಿ-ಶಯನಮಾಡುವ, ಅಪ್ಪನುಕ್ಕೇ-ಸ್ವಾಮಿಗೇ, ತೊಣ್ಡರ್-ದಾಸಭೂತರಾದವರಿಗೆ, ತೊಣ್ಡರ್-ದಾಸರಿಗೆ, ತೊಣ್ಡರ್-ದಾಸರಾದವರಿಗೆ, ತೊಣ್ಡನ್-ದಾಸಭೂತನಾದ, ಶಡಕೋಪನ್ - ಶಠಾರಿಮುನಿಯು, ಶೊಲ್ - ಸೂಕ್ತಿಯಾದ, ಆಯಿರತ್ತುಳ್-ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್-ಈ ದಶಕವನ್ನು, ಕಣ್ಡು-ಅರ್ಥಪರಿಶೀಲನವಮಾಡಿ, ಪಾಡವಲ್ಲಾರ್ - ಹಾಡಬಲ್ಲವರಿಗೆ, ಕಙ್ಗುಲುಮ್ ಪಕಲುಮ್-ರಾತ್ರಿಯೂ ಹಗಲೂ (ಸರ್ವಕಾಲದಲ್ಲೂ), ವಿನೈ-(ಭಗವದನುಭವಕ್ಕೆ ವಿಘ್ನರೂಪವಾದ) ಪಾಪವು, ಪೋಮ್-ಹೋಗುವುದು (ನಷ್ಟವಾಗುವುದು).

( ಸ-ಗಾ-ರ || )—

ತ್ರೈಗುಣ್ಯಾತ್ತ್ರಯುತಸ್ತ್ರಿಮೂರ್ತಿತನುಭೃದ್ಯಸ್ಸೃಷ್ಟಿರಕ್ಷಾಲಯಾನ್
ಕುರ್ವನ್ನಾಭಿಸರೋಜಭೃಚ್ಚ ಸಲಿಲೇ ತಂ ಶಾಯಿನಂ ಮಾಧವಮ್ |
ಸ್ತೋತುಂ ತಸ್ಯ ಹಿ ದಾಸದಾಸಪರಿಷದ್ದಾಸಾನುದಾಸಸ್ಸ್ವಯಂ
ಸಾಹಸ್ರಂ ಶಠಜಿಚ್ಚಕಾರ! ದಶಕಂ ಚೇದಂ ವಿದನ್ತೋಽನಘಾಃ ||

ತಾ|| ರಾಜಸ-ಸಾತ್ತ್ವಿಕ-ತಾಮಸ ಗುಣತ್ರಯಾಶ್ರಯರಾದ ಬ್ರಹ್ಮ-ವಿಷ್ಣು-ರುದ್ರರೆಂಬ ತ್ರಿಮೂರ್ತಿಗಳೂ ತಾನೇ ಆಗಿ (ಅನ್ತರ್ಯಾಮಿಯಾಗಿ), ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವ, ಪದ್ಮನಾಭನಾದ, ಕಾರಣಾರ್ಣವಶಾಯಿಯಾದ ಸ್ವಾಮಿಗೇ ದಾಸಾನು ದಾಸಾನುದಾಸರಾದವರಿಗೆ ದಾಸಭೂತರಾದ ಶಠಾರಿಮುನಿವರ್ಯರಿಂದ ರಚಿಸಲ್ಪಟ್ಟ ಸಹಸ್ರ ಪದ್ಯಮಾಲೆಯೊಳು ಈ ದಶಕವನ್ನು ಅರ್ಥಾನುಸನ್ಧಾನದೊಡನೆ ಹಾಡಬಲ್ಲವರಿಗೆ (ಪ್ರತಿಬನ್ಧಕವಾದ) ಸರ್ವಪಾಪವೂ ನಷ್ಟವಾಗಿ ಹೋಗಿ, ಭಗವದನುಭವಾನನ್ದವು ಸರ್ವಕಾಲದಲ್ಲೂ ಉಂಟಾಗುವುದು.

( ದ್ರು-ಉ-ಸಂ || )—

ಆದ್ಯೇ ಮುನಿಸ್ಸ ಶತಕಸ್ಯ ತು ಸಪ್ತಮಸ್ಯ
ತಸ್ಮಿನ್ನಪಿ ಪ್ರಪದನೇ ವಿಫಲೇ ವಿಷಣ್ಣಃ |
ಹಠೇನ ಪಾತಿತಮಿವ ಸ್ವಮವೇಕ್ಷ್ಯ ಗರ್ತೇ
ತಸ್ಮೈ ಸ್ವಭೀತಿಮವದದ್ವಿಷಯೇನ್ದ್ರಿಯೇಭ್ಯಃ ||

(ದ್ರ- ಉ-ತಾ-ರ ||)—

ನಿಸ್ಸಂಖ್ಯಾಶ್ಚರ್ಯಯೋಗಾದತಿಮಧುರತಯಾಽಥೋ ಜಗತ್ಕಾರಣತ್ವಾ-
ನ್ನ್ಯಗ್ರೋಧಾರ್ಕತ್ವಭಾವಾತ್ತ್ರಿದಶಪತಿತಯಾ ವಾಙ್ಮನಸ್ಸನ್ನಿಧಾನಾತ್ |
ಪೀಯೂಷಸ್ಪರ್ಶನಾದ್ಯೈ ರಖಿಲಪತಿತಯಾ ಲೋಕಸಂರಕ್ಷಣಾದ್ಯೈಃ
ಶಠ್ಯಾಶಙ್ಕಾಂ ಸಹೇತ ತ್ರಿತನುರಸುರಜೇತ್ಯಾಹ ಚಿಹ್ನಾನ್ಯಭಿಜ್ಞಃ ||

(ಈ ಪ್ರಥಮದಶಕದ ಸಾರಾಂಶ)—

ಈ ಪ್ರಥಮದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಪರಮಾರ್ತಿಯಿಂದ ಖಿನ್ನರಾಗಿ, ಪಂಚೇನ್ದ್ರಿಯಗಳೆಂಬ ಶತ್ರುಗಳು ವಿಷಯಗಳೆಂಬ ಹಳ್ಳಗಳಲ್ಲಿ ತಳ್ಳಿ ಪೀಡಿಸುತ್ತವೆಯೆಂದು ಮೊರೆಯಿಡುತ್ತ, ಈ ದುಃಖಗಳ ನಿವಾರಣಕ್ಕೆ (ಸೃಷ್ಟಿ-ಸ್ಥಿತಿ-ಲಯಕರ್ತನಾದ) ಸರ್ವಶಕ್ತನಾದ ಭಗವನ್ತನ ಅನುಗ್ರಹವೇ ಸಾಧನವೆಂದು ನಿರ್ಣಯಿಸಿ, ಅವನ ಪಾದಾರವಿನ್ದಯುಗಳವನ್ನೇ ಆಶ್ರಯಿಸಿರುತ್ತಾರೆ.

ಶ್ರೀಃ

## ಸಪ್ತಮಶತಕದಲ್ಲಿ—ದ್ವಿತೀಯದಶಕ.

(ಕಙ್ಗುಲುಮ್ ಪಕಲುಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿಯೆಂಬ ನಾಯಕಿಯು ಶ್ರೀರಂಗನಾಥನ ವಿರಹವನ್ನು ತಡೆಯಲಾರದೆ ಅತ್ಯನ್ತ ಸನ್ತಪ್ತೆಯಾಗಿರುವುದನ್ನು ನೋಡಿ ಅವಳ ತಾಯಿಯು ಶ್ರೀರಂಗನಾಥನನ್ನು ಕುರಿತು ಇವಳ ಅವಸ್ಥೆಯನ್ನು ವರ್ಣಿಸಿ—ಇವಳನ್ನು ಹೇಗೆ ಕಾಪಾಡುತ್ತೀಯೋ ?—ಎಂದು ಪ್ರಾರ್ಥಿಸುತ್ತಾಳೆ.)

(೧) ಕಙ್ಗುಲುಮ್ ಪಕಲುಮ್ ಕಣ್ತುಯಿಲಱಿಯಾಳ್
ಕಣ್ಣನೀರ್ ಕೈಕಳಾಲಿಱೈಕ್ಕುಮ್,
ಶಙ್ಗುಶಕ್ಕರಙ್ಗಳೆನ್ಱು ಕೈಕೂಪ್ಪುಮ್ ತಾಮರೈಕ್ಕಣ್ಣೆನ್ಱೇ ತಳರುಮ್,
ಎಙ್ಗನೇ ತರಿಕ್ಕೇನುನ್ನೈವಿಟ್ಟೆನ್ನುಮ್ ಇರುನಿಲಮ್ ಕೈ-
ತುೞಾವಿರುಕ್ಕುಮ್,
ಶೆಙ್ಗಯಲ್ ಪಾಯ್ನೀರ್ ತಿರುವರಙ್ಗತ್ತಾಯ್ !
ಇವಳ್ ತಿಱತ್ತೆನ್ ಶೆಯ್ಕಿನ್ಱಾಯೇ.

ಪ್ರ॥ ಕಙ್ಗುಲುಮ್ ಪಕಲುಮ್-ರಾತ್ರಿಯೂ ಹಗಲೂ, ಕಣ್‌ತುಯಿಲ್-ಕಣ್ಣುಗಳು ನಿದ್ರೆಮಾಡಲು ಮುಚ್ಚಿರಬೇಕೆಂಬುದನ್ನು, ಅಱಿಯಾಳ್-ತಿಳಿಯದವಳಾಗಿದಾಳೆ. ಕಣ್ಣನೀರ್ – ಕಣ್ಣುಗಳಿಂದ ಪ್ರವಹಿಸುವ ನೀರಿನಧಾರೆಯನ್ನು, ಕೈಕಳಾಲ್-ಕೈಗಳಿಂದ, ಇಱೈಕ್ಕುಮ್-ಎರಚುತ್ತಿರುವಳು ಶಙ್ಗಶಕ್ಕರಙ್ಗಳೆನ್ಱು-ಶಂಖಚಕ್ರಗಳೆಂದು, ಕೈಕೂಪ್ಪುಮ್ - ಅಂಜಲಿಮಾಡುವಳು. ತಾಮರೈಕ್ಕಣ್-(ನಿನ್ನ) ತಾವರೆಯಂತಿರುವ ಕಣ್ಣುಗಳು, ಎನ್ಱೇ-ಎಂದೇ, ತಳರುಮ್ – ಹೇಳಿ ಶ್ರಾನ್ತೆಯಾಗುವಳು ಉನ್ನೈವಿಟ್ಟು - ನಿನ್ನನ್ನು ಬಿಟ್ಟು, ಎಙ್ಗನೇತರಿಕ್ಕೇ-ಹೇಗೆ ಜೀವಿಸುವೆನು ? ಎನ್ನುಮ್-ಎನ್ನುವಳು. ಇರುನಿಲತ್-ವಿಸ್ತೀರ್ಣವಾದ ಭೂಮಿಯನ್ನೆಲ್ಲಾ, ಕೈತ್ತುಳಾ-ಕೈಯಿಂದ ಸ್ಪರ್ಶಿಸುತ್ತ, ಇರುಕ್ಕುಮ್-ಸುಮ್ಮನೆ ಇರುವಳು. ಶೆಮ್‌ಕಯಲ್‌ಪಾಯ್ - ಎಳೇ ಮೀನುಗಳು ಹಾರಿ ನುಗ್ಗುತ್ತಿರುವ, ನೀರ್-ನೀರುಳ್ಳ, ತಿರುವರಙ್ಗತ್ತಾಯ್-ಶ್ರೀರಂಗನಗರದ ಸ್ವಾಮಿಯೇ, ಇವಳ್ ತಿಱತ್ತು-ಇವಳ ವಿಷಯದಲ್ಲಿ, ಎ‍ನ್ಶೆಯ್‌ಕಿನ್ಱಾಯ್-ಏನು ಮಾಡುತ್ತೀಯೆ ?

( ಸ-ಗಾ-ರ ॥ )—

ನಿದ್ರಾಂ ನಾಪ್ನೋತಿ ನಕ್ತನ್ದಿವಮಿಯಮನುಬಲಂ ಸ್ಯಾತ್ಕಿರನ್ತೀ ಸ್ವಹಸ್ತಾ-
ದಶ್ರೂಣೀ! ತೇ ಶಙ್ಖಚಕ್ರೇ ವಿಶದಯತಿ! ಕರೋತ್ಯಞ್ಜಲಿಂ ಹಸ್ತತೋಽಪಿ |
ಪದ್ಮಾಕ್ಷೇತ್ಯಾರ್ತಿವಶ್ಯಾ ತವ ವಿರಹವಶಾ ಹಾ! ಕಥಂ ಸ್ವಾಮಿತಿ ತ್ವಾಂ
ಸರ್ವತ್ರೇಯಂ ವಿಚಿನ್ವನ್ನ್ಯಹಹ! ಕಥಮಿಯಂ ಜೀವತೀತ್ಯದ್ಯ ವೇತ್ಸಿ ॥

ತಾ॥ (ತಾಯಿಯು ಈ ನಾಯಕಿಯ ದಶೆಯನ್ನು ವರ್ಣಿಸುತ್ತಾಳೆ.) ರಾತ್ರಿಯೂ ಹಗಲೂ ನಿದ್ರೆಯೇ ಇಲ್ಲದವಳಾಗಿ ಇವಳು ಕಣ್ಣುನೀರಿನ ಪ್ರವಾಹವನ್ನು ತಡೆಯಲಾರದೆ ಕೈಗಳಿಂದ ಎರಚುತ್ತಿದಾಳೆ. ನಿನ್ನ ಶಂಖ-ಚಕ್ರಗಳನ್ನೇ ಸ್ಮರಿಸುತ್ತ ಅಞ್ಜಲಿ ಮಾಡುತ್ತಾಳೆ. ನಿನ್ನ ನೇತ್ರಪದ್ಮಗಳನ್ನು ಸ್ಮರಿಸಿ ಶ್ರಾನ್ತೆಯಾಗುತ್ತಿದಾಳೆ. ನಿನ್ನನ್ನು ಬಿಟ್ಟು ಹೇಗೆ ಜೀವಿಸುವೆನು ?—ಎನ್ನುತ್ತಾಳೆ. ನಿನ್ನನ್ನು ಹುಡುಕುವಂತೆ ಭೂಮಿಯನ್ನೆಲ್ಲಾ ಕೈಯಿಂದ ಸ್ಪರ್ಶಿಸಿ ಹಂಬಲಿಸುತ್ತಿದಾಳೆ. ಆದುದರಿಂದ ಶ್ರೀರಙ್ಗನಾಥಸ್ವಾಮಿಯೇ! ಇವಳ ವಿಷಯದಲ್ಲಿ ಏನುಮಾಡಬೇಕೆಂದು ಆಲೋಚಿಸುತ್ತೀಯೆ ?

(೨) ಎನ್ ಶೆಯ್ಗಿನ್ರಾಯೆನ್ ತಾಮರೈಕ್ಕಣ್ಣಾವೆನ್ನುಮ್
ಕಣ್ಣೀರ್ ಮಲ್ಕವಿರುಕ್ಕುಮ್,
ಎನ್ ಶೆಯ್ಗೇನೆತ್ತಿನೀರ್ ತಿರುವರಙ್ಗತ್ತಾಯೆನ್ನುಮ್
ವೆವ್ವುಯಿರ್ತ್ತುಯಿರ್ತ್ತುರುಕುಮ್,
ಮುನ್ ಶೆಯ್ದವಿನೈಯೇ ಮುಕಪ್ಪಡಾಯೆನ್ನುಮ್
ಮುಕಿಲ್ವಣ್ಣಾ ತಕುವದೋವೆನ್ನುಮ್,
ಮುನ್ ಶೆಯ್ದಿವ್ವುಲಕಮುಣ್ಡುಮಿೞ್ನ್ದಳನ್ದಾಯೆನ್
ಕೊಲೋ ಮುಡಿಕಿನ್ರದಿವಳ್ಕ್ಕೇ.

ಪ್ರ|| ಎನ್ ತಾಮರೈಕ್ಕಣ್ಣಾ-ನನ್ನ ಕಮಲಲೋಚನನೇ!, ಎನ್ನುಮ್-ಎನ್ನುತ್ತಿರುವಳು. ಕಣ್ಣೀರ್ ಮಲ್ಕ ಇರುಕ್ಕುಮ್-ಕಣ್ಣುನೀರು ತುಳುಕಿಬರುವಂತೆ ಇರುವಳು. ಎತ್ತಿನೀರ್-ಅಲೆಗಳನ್ನು ಎರಚುತ್ತಿರುವ (ಕಾವೇರಿ) ಪ್ರವಾಹವುಳ್ಳ, ತಿರುವರಙ್ಗತ್ತಾಯ್-ಶ್ರೀರಂಗದಲ್ಲಿ ವಾಸಮಾಡುವ ಸ್ವಾಮಿಯೇ!, ಎನ್ ಶೆಯ್ಗೇನ್-ಏನುಮಾಡಲಿ?, ಎನ್ನುಮ್-ಎಂದು ಹೇಳುವಳು. ವೆವ್ವುಯಿರ್ತ್ತು ಉಯಿರ್ತ್ತು-ಸನ್ತಾಪದಿಂದ ಮಹಾ ನಿಶ್ವಾಸವನ್ನು ಹೊರಪಡಿಸಿ ಹೊರಪಡಿಸಿ, ಉರುಕುಮ್-ದ್ರವೀಭೂತೆಯಾಗುತ್ತಿದಾಳೆ. ಮುನ್ ಶೆಯ್ದವಿನೈಯೇ-ಹಿಂದೆ ನಾನು ಮಾಡಿದ ಪಾಪದ ಫಲದಿಂದಲೋ, ಮುಕಪ್ಪಡಾಯ್-ನೀನು ಕಣ್ಣೆದುರಿಗೆ ಬಾರದೆ ಇರುತ್ತೀಯೆ?, ಎನ್ನುಮ್-ಎಂದು ಹೇಳುತ್ತಿದಾಳೆ!. ಮುಕಿಲ್ವಣ್ಣಾ-ಮೇಘವರ್ಣನೇ!, ತಕುವದೋ-(ಹೀಗಿರುವುದು) ನಿನಗೆ ಯುಕ್ತವೋ?, ಎನ್ನುಮ್-ಎಂದು ಹೇಳುವಳು. ಮುನ್ ಉಲಕಮ್ ಶೆಯ್ದು-ಪೂರ್ವದಲ್ಲಿ ಲೋಕಗಳನ್ನು ಸೃಷ್ಟಿಸಿ, ಉಣ್ಡು ಉಮಿೞ್ನ್ದು-ಭಕ್ಷಿಸಿ ಪುನಃ ಉಗುಳಿ (ಆವಿರ್ಭವಿಸುವಂತೆ ಮಾಡಿ), ಅಳನ್ದಾಯ್-ಅಳೆದವನೇ, ಇವಳ್ಕ್ಕು-ಇವಳಿಗೆ, ಎನ್ ಮುಡಿಕಿನ್ರದು ಕೊಲೋ-ಏನಾಗಿ ಮುಗಿಯುವುದೋ, ಎನ್ ಶೆಯ್ಗಿನ್ರಾಯ್-ಏನುಮಾಡಬೇಕೆಂದು ನೀನು ಆಲೋಚಿಸಿ ಇರುತ್ತೀಯೆ?

(ಸ-ಗಾ-ರ || )—
ಕಿಂ ವಾ ಕುರ್ವ್ಯಾಸ್ಸರೋಜಾಮ್ಬಕ! ಮಯಿ ಕೃಪಯೇತ್ಯೇವ
ಚಿನ್ತಾಕುಲಾ ಸ್ಯಾ-
ದ್ಬಾಷ್ಪಾವಳ್ಯಾ ಚ ರಙ್ಗೇಶ್ವರ! ರುಚಿರಸರಿನ್ನಾಯಕೇತ್ಯೇವ ವಕ್ತಿ |
ಉಚ್ಛ್ವಾಸೈಶ್ಚ ದ್ರುತಾ ಸ್ಯಾತ್! ಸ್ಮರತಿ ಕಿಲ ಪುರಾ ಕರ್ಮ ನೀಲಾಬ್ದವರ್ಣಂ
ಸೃಷ್ಟಿಸ್ಥಿತ್ಯನ್ತಹೇತುಂ ಕಥಯತಿ ಚ ಕಥಂ ಹನ್ತ! ಪ್ರೋಜ್ಜೀವಿತಾ ಸ್ಯಾತ್?||

ತಾ॥ ನನ್ನ ಕಮಲಲೋಚನನೇ!---ಎಂದು ಹೇಳುತ್ತ ಕಣ್ಣು ನೀರು ಸುರಿಸುವಳು. ಶ್ರೀರಙ್ಗನಾಥ! ಏನುಮಾಡಲಿ---ಎಂದು ಹೇಳುತ್ತ ದೊಡ್ಡ ಉಸಿರು ಬಿಟ್ಟು ಅತ್ಯನ್ತ ಸನ್ತಪ್ತೆಯಾಗಿ ದ್ರವೀಭೂತೆಯಾಗುತ್ತಿದ್ದಾಳೆ. "ಹಿಂದೆ ನಾನು ಮಾಡಿದ ಪಾಪದಿಂದಲೋ ನೀನು ನನಗೆ ಪ್ರತ್ಯಕ್ಷನಾಗದೆ ಇರುತ್ತೀಯೆ"---ಎಂದು ಹೇಳುತ್ತ, "ಮೇಘವರ್ಣನೇ! ಇದು ನಿನಗೆ ಯುಕ್ತವೋ?"---ಎಂದು ಹೇಳುತ್ತಿದ್ದಾಳೆ. ಆದುದರಿಂದ ಸಕಲ ಲೋಕ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಭೂತನಾಗಿ, ತ್ರಿವಿಕ್ರಮನಾಗಿ ಲೋಕಗಳನ್ನು ಅಳೆದ ಸ್ವಾಮಿಯೇ! ಇವಳ ಪರಿಣಾಮವು ಏನು ಆಗುವುದೋ? ನೀನು ಇವಳ ವಿಷಯದಲ್ಲಿ ಏನು ಮಾಡಬೇಕೆಂದು ಇರುತ್ತೀಯೆ?

(೩) ವಳ್ಕಿಲಳಿತ್ತುಯುಮ್ ಮಣಿವಣ್ಣಾವೆನ್ನುಮ್
ವಾನಮೇ ನೋಕ್ಕುಮ್ ಮೈಯಾಕ್ಕುಮ್,
ಉಳ್ಕುಡೈಯಶುರರುಯಿರೆಲ್ಲಾಮುಣ್ಡ ವೊರುವನೇ
ಯೆನ್ನುಮುಳ್ಳುರುಕುಮ್,
ಕಳ್ಕಿಲೀಯುನ್ನೈ ಕ್ಕಾಣುಮಾಱರುಳಾಯ್
ಕಾಕುತ್ತಾ ಕಣ್ಣನೇ ಯೆನ್ನುಮ್,
ತಿಣ್ಕೊಡಿಮದಿಳ್‌ಶೂೞ್ ತಿರುವರಙ್ಗತ್ತಾಯಿವಳ್
ತಿಱತ್ತೆನ್ ಶೆಯ್‌ದಿಟ್ಟಾಯೇ.

ಪ್ರ॥ ಇತ್ತುಯುಮ್–ಸ್ವಲ್ಪವೂ, ವಳ್ಕು ಇಲಳ್–ಲಜ್ಜೆಯಿಲ್ಲದವಳಾಗಿದ್ದಾಳೆ. ಮಣಿವಣ್ಣಾ–ನೀಲಮಣಿವರ್ಣನೇ!, ಎನ್ನುಮ್–ಎನ್ನುವಳು. ವಾನಮೇ ನೋಕ್ಕುಮ್–(ನೀನು ಬರುವೆಯೆಂದು) ಆಕಾಶವನ್ನೇ ನೋಡುತ್ತಿರುವಳು. ಮೈಯಾಕ್ಕುಮ್–ಭ್ರಾನ್ತೆಯಾಗುವಳು. ಉಳ್ಕು–ಪರಾಕ್ರಮವನ್ನು, ಉಡೈ–ಪಡೆದಿರುವ, ಅಶುರರ್–ರಾಕ್ಷಸರ, ಉಯಿರೆಲ್ಲಾಮ್ - ಪ್ರಾಣಗಳನ್ನೆಲ್ಲಾ, ಉಣ್ಡ–ಭಕ್ಷಿಸಿದ, ಒರುವನೇ - ಅದ್ವಿತೀಯಶೂರನೇ, ಎನ್ನುಮ್–ಎಂದು ಹೇಳುತ್ತಿದ್ದಾಳೆ. ಉಳ್ ಉರುಕುಮ್–(ಇವಳ) ಮನಸ್ಸು ದ್ರವೀಭೂತವಾಗುವುದು. ಕಳ್ಕು ಇಲೀ–ಕಣ್ಣಿಗೆ ಕಾಣದಂತೆ ಇರುವ ನೀನು, ಉನ್ನೈ–ನಿನ್ನನ್ನು, ಕಾಣುಮ್ ಆಱು–ಕಾಣುವ ರೀತಿಯನ್ನು, ಅರುಳಾಯ್–ಕೃಪೆಯಿಂದ ತಿಳಿಸು. ಕಾಕುತ್ತಾ–ಕಾಕುತ್ಸ್ಥನಾದ ಶ್ರೀರಾಮನೇ, ಕಣ್ಣನೇ - ಶ್ರೀಕೃಷ್ಣನೇ, ಎನ್ನುಮ್–ಎಂದು ಕೂಗುತ್ತಿದ್ದಾಳೆ. ತಿಣ್ ಕೊಡಿ–ದೃಢವಾದ ಧ್ವಜಗಳುಳ್ಳ, ಮದಿಳ್ ಶೂೞ್–ಪ್ರಾಕಾರಗಳಿಂದ ಪರಿವೃತವಾದ, ತಿರುವರಙ್ಗತ್ತಾಯ್–ಶ್ರೀರಂಗದಲ್ಲಿ ವಾಸಮಾಡುವವನೇ, ಇವಳ್ ತಿಱತ್ತು–ಇವಳ ವಿಷಯದಲ್ಲಿ, ಎನ್ ಶೆಯ್‌ದಿಟ್ಟಾಯೇ–(ನೀನು) ಏನುಮಾಡಿರುತ್ತೀಯೆ?

( ಸ-ಗಾ-ರ ॥ )—

ಲಜ್ಜಾಹೀನೇವ ಭಾತಿ ಸ್ವಯಮಿಹ ಮಣಿವರ್ಣೇತಿ ಖಂ ಪಶ್ಯತೀಯಂ
ಮೂರ್ಛಾಮಾಪ್ನೋತಿ ವೀರಾಸುರಕುಲಕದನೇತ್ಯೇವ ಚಿತ್ತೇ ದ್ರುತಾ ಸ್ಯಾತ್।
ಕಾಕುತ್ಸ್ಥ! ತ್ವಾಮದೃಶ್ಯಂ ಕಥಯ ಕಥಮಹಂ ಹನ್ತ! ಪಶ್ಯಾಮಿ ಕೃಷ್ಣೇ-
ತ್ಯೇತಾಂ ಶ್ರೀರಙ್ಗನಾಥ! ತ್ವಮಿಹ ವದ ಕಥಂ ಕಿಂ ಕರೋಷ್ಯದ್ಯ ಬಾಲಾಸ್ಯಾಃ॥

ತಾ॥ ಇವಳು ಸ್ವಲ್ಪವೂ ಲಜ್ಜೆಯಿಲ್ಲದವಳಾಗಿ "ಮಣಿವರ್ಣನೇ!" ಎಂದು ನಿನ್ನನ್ನೇ ಕೂಗುತ್ತ, ಆಕಾಶವನ್ನೇ ನೋಡುತ್ತ, ಭ್ರಾನ್ತೆಯಾಗುತ್ತಿದಾಳೆ. "ರಾಕ್ಷಸಕುಲಾನ್ತಕನಾದ ಅದ್ವಿತೀಯಶೂರನೇ!"—ಎಂದು ಮೊರೆಯಿಡುತ್ತ ದ್ರವೀಭೂತ ಹೃದಯೆಯಾಗುತ್ತಿದಾಳೆ. "ಅದೃಶ್ಯನಾದ ನಿನ್ನನ್ನು ನಾನು ಕಾಣುವ ರೀತಿಯನ್ನು ಹೇಳು—ಎಲೈ ಕಾಕುತ್ಸ್ಥನೇ! ಕೃಷ್ಣನೇ!"—ಎಂದು ಕೂಗುತ್ತಿದಾಳೆ. ದೃಢಧ್ವಜಪತಾಕಾಲಂಕೃತವಾದ ಪ್ರಾಕಾರಗಳುಳ್ಳ ಶ್ರೀರಂಗದಲ್ಲಿ ವಾಸಮಾಡುವ ಸ್ವಾಮಿಯೇ!—ಇವಳು ಈ ಅವಸ್ಥೆಯನ್ನು ಹೊಂದುವಂತೆ ನೀನು ಏನುಮಾಡಿರುತ್ತೀಯೋ? (ಯಾವ ಮನ್ತ್ರ ತನ್ತ್ರಾದಿ ಪ್ರಯೋಗವಂ ಮಾಡಿರುತ್ತೀಯೋ?)

(೪) ಇಟ್ಟಕಾಲಿಟ್ಟಕೈಕಳಾಯಿರುಕ್ಕುಮೆಳುನ್ದುಲಾವಿ
ಮಯಙ್ಗುಮ್ ಕೈಕೂಪ್ಪುಮ್,
ಕಟ್ಟಮೇಕಾದಲೆನ್ರು ಮೂರ್ಚ್ಚಿಕ್ಕುಮ್ ಕಡಲ್ವಣ್ಣಾ
ಕಡಿಯೈಕಾಣೆನ್ನುಮ್,
ವಟ್ಟವಾಯ್ನೇಮಿ ವಲಙ್ಕೈಯಾವೆನ್ನುಮ್
ವನ್ದಿಡಾಯೆನ್ರೆನ್ರೇ ಮಯಙ್ಗುಮ್,
ಶಿಟ್ಟನೇ ಶೆಳುನೀರ್ ತ್ತಿರುವರಙ್ಗತ್ತಾಯಿವಳ್ತಿರತ್ತೆನ್
ಶಿನ್ದಿತ್ತಾಯೇ.

ಪ್ರ॥ ಇಟ್ಟಕಾಲ್-ಮಡಗಿದಹಾಗೆ ಇರುವ ಕಾಲುಗಳೂ, ಇಟ್ಟಕೈಕಳಾಯ್-ಮಡಗಿದ ಹಾಗಿರುವ ಕೈಗಳೂ ಉಳ್ಳವಳಾಗಿ, ಇರುಕ್ಕುಮ್ -(ಸನ್ತಾಪದಿಂದ) ಪರವಶೆಯಾಗಿದಾಳೆ. ಎಳುನ್ದು ಉಲಾವಿ-(ವಿಷಮ-ಸನ್ನಿಪಾತಜ್ವರದಲ್ಲಿ ಎದ್ದು ಓಡಿಹೋಗುವಂತೆ) ಎದ್ದು ಮನಸ್ಸುಬಂದಂತೆ ಓಡಿಹೋಗಿ ಸಂಚರಿಸುತ್ತ, ಮಯಙ್ಗುಮ್-ಮೋಹಿತೆಯಾಗುವಳು. ಕೈಕೂಪ್ಪುಮ್-ಅಂಜಲಿಮಾಡುವಳು, ಕಾದಲ್-ಆಶೆಯು, ಕಟ್ಟಮೇಯೆನ್ರು-ಕಷ್ಟವೇಯೆಂದು, ಮೂರ್ಚ್ಚಿಕ್ಕುಮ್-ಮೂರ್ಛೆ

ಹೊಂದುವಳು. ಕಡಲ್‌ವಣ್ಣಾ–ಸಮುದ್ರದಂತೆ ಅಪರಿಚ್ಛಿನ್ನಮಹಿಮನೇ, ಕಡಿಯೈ ಕಾಣ್–(ನನ್ನ ವಿಷಯದಲ್ಲಿ ನೀನು) ಕ್ರೂರಸ್ವಭಾವನಾಗಿರುತ್ತೀಯೆ, ಎನ್ನುಮ್–ಎಂದು ಹೇಳುವಳು. ವಟ್ಟವಾಯ್-ಸುತ್ತುವ ಬಾಯಿಯುಳ್ಳ, ನೇಮಿ-ಚಕ್ರವನ್ನು ಧರಿಸಿರುವ, ವಲಙ್ಕೈಯಾ–ಬಲಗೈಯುಳ್ಳವನೇ, ಎನ್ನುಮ್–ಎಂದು ಹೇಳುವಳು. ವನ್ದಿಡಾಯ್ – ಬಂದುಬಿಡು, ಎನ್ಱೆನ್ಱೇ – ಎಂದು ಹೇಳಿ ಹೇಳಿ, ಮಯಙ್ಗುಮ್ - ಮೋಹವನ್ನು ಹೊಂದುವಳು. ಶಿಟ್ಟನೇ–ಶ್ರಿಯಃಪತಿಯೇ, ಶೆಱುನೀರ್–ರಮ್ಯವಾದ ನದೀಜಲವುಳ್ಳ, ತಿರುವರಙ್ಗತ್ತಾಯ್ – ಶ್ರೀರಂಗನಗರದ ಸ್ವಾಮಿಯೇ, ಇವಳ್ ತಿಱತ್ತು-ಇವಳ ವಿಷಯದಲ್ಲಿ, ಎನ್ ಶಿನ್ದಿತ್ತಾಯೇ-ಏನು ಆಲೋಚಿಸಿ ಇರುತ್ತೀಯೆ?

( ಶೃ--ಗಾ-ರ || )—

ನಿಕ್ಷಿಪ್ತೌ ಪಾಣಿಪಾದೌ ಭವತಿ ಚರತಿ ಚಾಪ್ಯನ್ತರಾ ಮೋಹಿತಾ ಸ್ಯಾತ್
ಕೃತ್ವಾ ಚಾಪ್ಯಞ್ಜಲಿಂ ಸಾ ವಿಷಯಚಪಲತಾಂ ವಕ್ತಿ ಧಿಙ್ಮೂರ್ಛಿತಾ ಸ್ಯಾತ್|
ಕ್ರೂರೋಽಸ್ಯಮ್ಭೋಧಿವರ್ಣೇತ್ಯಪಿ ವದತಿ ಸಮಾಹೂಯ ಹೇ! ಚಕ್ರಪಾಣೇ!
ಮಾಮಾಯಾಹೀತಿ ಮೋಹಂ ಭಜತಿ ಕಿಲ ಹರೇ ರಙ್ಗರಾಟ್! ಕಿನ್ನು ಕುರ್ಯಾಃ?||

ತಾ|| ಕೈಕಾಲುಗಳು ಇಟ್ಟಹಾಗೆಯೇ ಇರುವಂತೆ ಇವಳೂ ಚಲಿಸದೆ ಪರವಶೆಯಾಗಿದಾಳೆ. ಮತ್ತು ಮನಸ್ಸುಬಂದಂತೆ ಎದ್ದು ಓಡಿಹೋಗಿ ಪುನಃ ಮೋಹಾವಿಷ್ಟೆಯಾಗುತ್ತಾಳೆ. ಕೈಮುಗಿಯುತ್ತ–‘‘ಆಶೆಯೆಂಬುದು ಬಹು ಕಷ್ಟವನ್ನುಂಟುಮಾಡುವುದು’’—ಎಂದು ಹೇಳುತ್ತ ಮೂರ್ಛೆ ಹೊಂದುವಳು. ‘‘ಸಮುದ್ರದಂತೆ ಅಪಾರವಾದ ಮಹಿಮೆಯುಳ್ಳವನೇ! ನೀನು ನನ್ನ ವಿಷಯದಲ್ಲಿ ಕ್ರೂರನಾಗಿರುತ್ತೀಯೆ’’—ಎಂದು ಹೇಳುವಳು. ‘‘ಚಕ್ರಪಾಣಿಯೇ! ಬಂದುಬಿಡು’’—ಎಂದು ಕೂಗಿ ಮೋಹಿತೆಯಾಗುವಳು. ಶ್ರೀರಂಗನಾಥನೇ! ಇವಳ ವಿಷಯದಲ್ಲಿ ಏನು ಮಾಡಬೇಕೆಂದು ಚಿನ್ತಿಸಿ ಇರುತ್ತೀಯೋ?

(೫೪) ಶಿನ್ದಿಕ್ಕುಮ್ ತಿಶೈಕ್ಕುಮ್ ತೇಱುಮ್ ಕೈಕೂಪ್ಪುಮ್
ತಿರುವರಙ್ಗತ್ತುಳ್ಳಾಯೆನ್ನುಮ್,
ವನ್ದಿಕ್ಕುಮ್, ಆಙ್ಗೇ ಮಱ್ಱುಕ್ಕಣ್ಣೀರ್‌ಮಲ್ಕ
ವನ್ದಿಡಾಯೆನ್ಱೆನ್ಱೇ ಮಯಙ್ಗುಮ್,
ಅನ್ದಿಪ್ಪೋದವುಣನುಡಲಿಡನ್ದಾನೇ ಯಲೈಕಡಲ್‌ಕಡೈನ್ದ
ವಾರಮುದೇ,
ಶನ್ದಿತ್ತುನ್ ಶರಣಮ್ ಶಾರ್ವದೇ ವಲಿತ್ತ ಕೈಯಲೈ
ಮೆಯ್ಯಲ್‌ಶೆಯ್‌ದಾನೇ.

ಪ್ರ॥ ಅನ್ದಿಪ್ಪೋದು – ಸನ್ಧ್ಯಾಕಾಲದಲ್ಲಿ, ಅವುಣ್‌– ಅಸುರನಾದ ಹಿರಣ್ಯಕಶಿಪುವಿನ, ಉಡಲ್–ಶರೀರವನ್ನು, ಇಡನ್ದಾನೇ– ಸೀಳಿದವನೇ, ಅಲ್ಲೈಕಡಲ್– ಅಲೆಗಳೊಡನೆ ಕೂಡಿದ ಕ್ಷೀರಸಮುದ್ರವನ್ನು ಕಡೈನ್ದ – ಮಥನಮಾಡಿದ, ಆರಮುದೇ–ಅಮೋಘವಾದ ಅಮೃತದಂತ ಭೋಗ್ಯನಾದವನೇ, ಶನ್ದಿತ್ತು - ಬಾಹ್ಯಸಂಶ್ಲೇಷವನ್ನು ಪಡೆದು, ಉನ್ ಶರಣಮೇಶಾರ್ವದು -- ನಿನ್ನ ಚರಣಗಳನ್ನೇ ಸೇರೋಣವೆಂಬ ಆಶೆಯನ್ನು, ವಲಿತ್ತ–ಬಲವಾಗಿ ಹಿಡಿದಿರುವ, ತ್ತೈಯಲೈ–ಈ ಕನ್ಯೆಯನ್ನು, ಮೈಯಲ್ ಶೆಯ್‌ದಾನೇ – ಮೋಹಪಡಿಸಿ ಭ್ರಾನ್ತೆಯಾಗುವಂತೆ ಮಾಡಿದವನೇ !, ಶಿನ್ದಿಕ್ಕುಮ್ – (ಇವಳು) ಪೂರ್ವ ಸಂಶ್ಲೇಷ ಪ್ರಕಾರವನ್ನು ಚಿನ್ತಿಸುವಳು, ತಿಶೈಕ್ಕುಮ್ – ಬುದ್ಧಿಹೀನೆಯಾಗಿ ಮೋಹಿತೆಯಾಗುವಳು, ತೇಱುಮ್ – (ಹಾಗೆಯೇ) ಬುದ್ಧಿವಂತೆಯಾಗೆ (ತಿಳಿದವಳಂತೆ) ಆಗುವಳು. ಕೈಕೂಪ್ಪುಮ್ – (ನೀನು ಬಂದಿರುವುದಾಗಿ ಭ್ರಮಿಸಿ) ಅಂಜಲಿಮಾಡುವಳು. ತಿರುವರಙ್ಗತ್ತುಳ್ಳಾಯ್ ಎನ್ನುಮ್-ಶ್ರೀರಙ್ಗನಾಥನೇ ಎನ್ನುವಳು. ವನ್ದಿಕ್ಕುಮ್- ನಮಸ್ಕರಿಸುವಳು. ಆಙ್ಗೇ–ಅಲ್ಲಿಯೇ ನಿಂತು, ಮಳ್ಳ–ಶೀತಳವಾದ (ಮಳೆಯಂತೆ ಧಾರೆಯಾಗಿರುವ), ಕಣ್ಣೀರ್‌ಮಲ್‌ಕ-ಕಣ್ಣುನೀರು ಸುರಿಯುವಂತೆ, ವನ್ದಿಡಾಯ್- ಬಂದುಬಿಡು, ಎನ್ನೆನ್ನೇ – ಎಂದು ಹೇಳಿ ಹೇಳಿ, ಮಯಙ್ಗುಮ್ – ಮೋಹವಂ ಹೊಂದುವಳು.

( ಸ–ಗಾ–ರ ॥ )—

ಸಞ್ಚಿನ್ತ್ಯೇಕ್ಷವಾಪಿ ಮೋಹಂ ಭಜತಿ ಪುನರಿಯಂ ಯಾತಿ ಸಂಜ್ಞಾಂ
ಚ ಭಕ್ತ್ಯಾ
ಕೃತ್ವಾಚಾಪ್ಯಞ್ಜಲಿಂ ತ್ವಾಂ ನಮತಿ ಕಿರತಿ ಸಾ ರಙ್ಗರಾಜೇತಿ ಚಾಶ್ರೂಣ್|
ಆಯಾಹೀತ್ಯೇವ ಮೋಹಂ ಭಜತಿ ನರಹರೇ! ಕಾಯಮುದ್ಭಿನ್ನದೈತ್ಯ !
ಕ್ಷೀರಾಬ್ಧೇಃ ಪ್ರಾಪ್ತಪೂರ್ಣಾಮೃತ! ಕುಶಲಮತಿಂ ಕನ್ಯಕಾಂ
ಮೋಹಯೇಃ ಕಿಮ್ ? ||

ತಾ॥ ಸನ್ಧ್ಯಾಕಾಲದಲ್ಲಿ ಹಿರಣ್ಯಾಸುರನ ಶರೀರವನ್ನು ಸೀಳಿದವನೇ ! ಕ್ಷೀರಾಬ್ಧಿಮಥನವಂಮಾಡಿದ ಪೂರ್ಣಾಮೃತಪ್ರಾಯನೇ! (ಪೂರ್ಣಾಮೃತ ಸದೃಶೆಯಾದ ಲಕ್ಷ್ಮಿಯನ್ನು ಪಡೆದವನೆ !) ನಿನ್ನ ಬಾಹ್ಯಸಂಶ್ಲೇಷವನ್ನು ಅಪೇಕ್ಷಿಸಿ ನಿನ್ನ ಚರಣಗಳನ್ನೇ ಸೇರಬೇಕೆಂದು ಹಠವಂ ಹಿಡಿದಿರುವ ಈ ಕನ್ಯೆಯನ್ನು ಹೀಗೆ

ಮೋಹಪಡಿಸಿ ಇರುತ್ತೀಯೆ. ಇವಳು ಪೂರ್ವಸಂಶ್ಲೇಷವಂ ಸ್ಮರಿಸಿ ಮೋಹಿತೆಯಾಗುವಳು; ಪುನಃ ತಿಳಿದವಳಂತೆ ಆಗುವಳು. ಕೈಮುಗಿದು ನಿಂತು ಶ್ರೀರಂಗನಾಥನೇ ಯೆನ್ನುವಳು. ನಮಸ್ಕರಿಸಿ ನಿಂತು ಕಣ್ಣುನೀರು ಸುರಿಸಿ –"ಬಂದು ಬಿಡು" ಎಂದು ಮೊರೆಯಿಡುತ್ತ ಮೋಹವಂ ಹೊಂದುವಳು. (ಇವಳ ಅವಸ್ಥೆಯು ಹೀಗಿದೆಯೆಂದು ಭಾವವು)

(೬) ಮೈಯಲ್‌ಶೆಯ್ದೆನ್ನೈ ಮನಙ್ಗವರ್‌ನ್ದಾನೇಯೆನ್ನುಮ್
ಮಾಮಾಯನೇ ಯೆನ್ನುಮ್,
ಶೆಯ್ಯವಾಯ್‌ಮಣಿಯೇಯೆನ್ನುಮ್ ತಣ್‌ಪುನಲ್‌ಶೂೞ್
ತಿರುವರಙ್ಗತ್ತುಳ್ಳಾಯೆನ್ನುಮ್,
ವೆಯ್ಯವಾಳ್ ತಣ್ಡುಶಙ್ಗುಶಕ್ಕರಮ್ ವಿಲ್ಲೇನ್ದುಮ್
ವಿಣ್ಣೋರ್‌ಮುದಲೆನ್ನುಮ್,
ಪೈಕೊಳ್‌ಪಾಮ್ಬಣೈಯಾಯಿವಳ್ ತಿಱತ್ತರುಳಾಯ್
ಪಾವಿಯೇಱ್ ಶೆಯಱ್ಪಾಲದುವೇ.

ಪ್ರ|| ಎನ್ನೈ - ನನ್ನನ್ನು, ಮೈಯಲ್‌ಶೆಯ್ದು - ಮೋಹಪಡಿಸಿ, ಮನಮ್‌ಕವರ್‌ನ್ದಾನೇ-(ನನ್ನ) ಮನಸ್ಸನ್ನು ಅಪಹರಿಸಿದವನೇ, ಎನ್ನುಮ್-ಎನ್ನುತ್ತಾಳೆ. ಮಾಮಾಯನೇ - ಮಹಾ ಮಾನುಷಚೇಷ್ಟಿತನೇ, ಎನ್ನುಮ್ - ಎನ್ನುತ್ತಾಳೆ. ಶೆಯ್ಯವಾಯ್-ಬಿಂಬಾಧರವುಳ್ಳ, ಮಣಿಯೇ-ನೀಲಮಣಿ ಸದೃಶನೇ, ಎನ್ನುಮ್-ಎನ್ನುತ್ತಾಳೆ. ತಣ್-ಶೀತಳವಾದ, ಪುನಲ್‌ಶೂೞ್-ಜಲಪ್ರವಾಹದಿಂದ ಪರಿವೃತವಾದ, ತಿರುವರಙ್ಗತ್ತು - ಶ್ರೀರಂಗನಗರದಲ್ಲಿ, ಉಳ್ಳಾಯ್ - ವಾಸಮಾಡುತ್ತಿರುವವನೇ, ಎನ್ನುಮ್-ಎನ್ನುತ್ತಾಳೆ. ವೆಯ್ಯ-ತೀವ್ರವಾದ (ಶತ್ರುನಾಶಕವಾದ), ವಾಳ್-ಖಡ್ಗ, ತಣ್ಡು-ಗದೆ, ಶಙ್ಗು-ಶಙ್ಖ, ಶಕ್ಕರಮ್-ಚಕ್ರ, ವಿಲ್-ಧನುಸ್ಸು, ಏನ್ದುಮ್-ಇವುಗಳನ್ನೆಲ್ಲಾ ಧರಿಸಿರುವ, ವಿಣ್ಣೋರ್‌ಮುದಲ್ - ನಿತ್ಯಸೂರಿಗಳಿಗೆ ಕಾರಣಭೂತನೇ, ಎನ್ನುಮ್-ಎನ್ನುವಳು. ಪೈಕೊಳ್-ಫಣೆಯುಳ್ಳ, ಪಾಮ್ಬು-ಆದಿಶೇಷನನ್ನೇ, ಅಣೈಯಾಯ್ - ಶಯನವಾಗಿ ಉಳ್ಳವನೇ, ಇವಳ್ ತಿಱತ್ತು - ಇವಳ ವಿಷಯದಲ್ಲಿ, ಪಾವಿಯೇಱ್-ಪಾಪಿನಿಯಾದ ನಾನು, ಶೆಯಱ್ಪಾಲದು-ಮಾಡಬೇಕಾದ ರೀತಿಯನ್ನು, ಅರುಳಾಯ್-ಕೃಪೆಯಿಂದ ಹೇಳು.

( ಸ-ಗಾ-ರ || )—

ಮಾಯಿನ್! ಮುಗ್ಧಾಂ ಚ ಕೃತ್ವಾ ಮಮ ಹರಸಿ ಮನೋ
ರಮ್ಯವಕ್ತ್ರೋಽಸಿ ರತ್ನೇ-
ತ್ಯೇವಂ ಶೀತಾಮ್ಬುಧಾರಾವೃತಶುಭನಗರೀರಙ್ಗನಾಥೇತಿ ವಕ್ತಿ |
ಧತ್ಸೇ ಶೀವ್ರಾಸಿಚಾಪೌ ಸುರವರ! ಶರತಶ್ಶಙ್ಖಚಕ್ರೇ ಗದಾಂ ಚೇ-
ತ್ಯೇವಂ ಶ್ರೀಶೇಷಶಾಯಿನ್! ತ್ವಯಿ ಧೃತಹೃದಯಾಂ ತಾಮಿಮಾಂ
ಕಿನ್ನು ಕುರ್ಯಾಮ್ ? ||

ತಾ|| ಇವಳು ನಿನ್ನನ್ನೇ ಸ್ಮರಿಸುತ್ತ—"ನನ್ನನ್ನು ಮೋಹಪಡಿಸಿ ಚಿತ್ತವನ್ನು ಅಪಹರಿಸಿದವನೇ! ಮಹಾ ಮಾಯಾಚೇಷ್ಟಿತನೇ! ಬಿಂಬಾಧರವುಳ್ಳ ನೀಲಮಣಿ ಸದೃಶನೇ! ಶ್ರೀರಙ್ಗನಗರವಾಸಿಯೇ! ಶಙ್ಖಚಕ್ರಗದಾಖಡ್ಗಶಾರ್ಙ್ಗಧರನಾದ ನಿತ್ಯಸೂರೀಶ್ವರನೇ!"—ಎನ್ನುತ್ತಿದ್ದಾಳೆ. ಶ್ರೀ ಶೇಷಶಾಯಿಯಾದ ಸ್ವಾಮಿಯೇ! ಇವಳ ವಿಷಯದಲ್ಲಿ—ಏನೂ ತಿಳಿಯದೆ ಭ್ರಾನ್ತೆಯಾಗಿರುವ (ಪಾಪಿನಿಯಾದ) ನಾನು ಏನುಮಾಡಬೇಕೋ ಅದನ್ನು ಕೃಪೆಯಿಂದ ಹೇಳು.

(೭) ಪಾಲತುನ್ಬಙ್ಗಳಿನ್ಬಙ್ಗಳ್ ಪಡೈತ್ತಾಯ್ ಪಱ್ಱಿಲಾರ್
ಪಱ್ಱು ನಿನ್ಱಾನೇ,
ಕಾಲಶಕ್ಕರತ್ತಾಯ್ ಕಡಲಿಡಮ್ಕೊಣ್ಡ
ಕಡಲ್ವಣ್ಣಾ ಕಣ್ಣಾನೇ ಯೆನ್ನುಮ್,
ಶೇಲ್ಕೊಳ್ ತಣ್ಪುನಲ್ಶೂೞ್ ತಿರುವರಙ್ಗತ್ತಾ-
ಯೆನ್ನುಮ್ ಎನ್ತೀರ್ತ್ತನೇ ಯೆನ್ನುಮ್,
ಕೋಲಮಾಮೞೈಕ್ಕಣ್ ಪನಿಮಲ್ಕ ವಿರುಕ್ಕುಮೆನ್ನುಡೈ
ಕ್ಕೋಮಳಕ್ಕೊೞುನ್ದೇ.

ಪ್ರ|| ಎನ್ನುಡೈ-ನನ್ನ, ಕೋಮಳ-ಕೋಮಲವಾದ, ಕೊೞುನ್ದು-ಲತಾಂಕುರದಂತೆ ಸುಕುಮಾರಿಯಾದ ಈ ಕನ್ಯೆಯು, ಪಾಲ- ಎಲ್ಲಾ ಕಡೆಗಳಲ್ಲೂ, ತುನ್ಬಙ್ಗಳ್-(ಅನಾಶ್ರಿತರಿಗೆ) ದುಃಖಗಳನ್ನೂ, ಇನ್ಬಙ್ಗಳ್-(ಆಶ್ರಿತರಿಗೆ) ಸುಖಗಳನ್ನೂ, ಪಡೈತ್ತಾಯ್- ಉಂಟುಮಾಡಿದವನೇ, ಪಱ್ಱು ಇಲಾರ್-ಅನಾಥರಾದ

ವರಿಗೆ, ಪಱ್ಱು-ಆಶ್ರಯಿಸಲು ಅನುಕೂಲವಾಗುವಂತೆ, ನಿನ್ಱಾನೇ - ನಿಂತವನೇ, ಕಾಲಶಕ್ಕರತ್ತಾಯ್ - ಕಾಲಚಕ್ರನಿರ್ವಾಹಕನೇ, ಕಡಲ್ - ಸಮುದ್ರವನ್ನು, ಇಡಮ್‌ಕೊಣ್ಡ - ವಾಸಸ್ಥಾನವಾಗಿ ಉಳ್ಳ, ಕಡಲ್‌ವಣ್ಣಾ - ಸಮುದ್ರದಂತೆ ಗಂಭೀರಸ್ವಭಾವನೇ, ಕಣ್ಣನೇ-ಶ್ರೀಕೃಷ್ಣನೇ, ಎನ್ನುಮ್-ಎಂದು ಹೇಳುತ್ತಾಳೆ. ಶೇಲ್‌ಕೊಳ್-ಮೀನುಗಳುಳ್ಳ, ತಣ್-ಶೀತಳವಾದ, ಪುನಲ್‌ಶೂೞ್-ಜಲಪ್ರವಾಹದಿಂದ ಪರಿವೃತವಾದ, ತಿರುವರಙ್ಗತ್ತಾಯ್-ಶ್ರೀರಙ್ಗದಲ್ಲಿ ವಾಸಮಾಡುವವನೇ, ಎನ್ನುಮ್-ಎನ್ನುತ್ತಾಳೆ. ಎನ್‌ತೀರ್‌ತ್ತನೇ-ನನ್ನ ಅವಗಾಹನ ತೀರ್ಥಸದೃಶನೇ, ಎನ್ನುಮ್-ಎನ್ನುತ್ತಾಳೆ. ಕೋಲಮಾಮಲರ್‌ಕ್ಕಣ್-ರಮ್ಯವಾಗಿ ವಿಶಾಲವಾದ ಆರ್ದ್ರನೇತ್ರಗಳಲ್ಲಿ, ಪನಿಮಲ್‌ಕ ಇರುಕ್ಕುಮ್-ನೀರು ಸುರಿಯುವಂತೆ ಇರುವಳು.

( ಸ-ಗಾ-ರ || )—

ನಾನಾದುಃಖಾನಿ ಭೋಗಾನಪಿ ವಿತರಸಿ ಭೋ! ದೀನಬನ್ಧೋ! ದಯಾಳೋ
ಕಾಲಾಧೀಶೋಽಸಿ ಚಾಮ್ಭೋನಿಧಿಕೃತಶಯನಃ ಕೃಷ್ಣ! ಗಮ್ಭೀರಭಾವಃ |
ಮೀನಾಕ್ರಾನ್ತಾಮ್ಬುಧಾರಾವೃತ-ಶುಭನಗರೀ-ರಙ್ಗನಾಥೇತಿ ತೀರ್ಥೇ-
ತ್ಯೇವಂ ಬಾಷ್ಪಾಳಿವರ್ಷಾಕ್ಷ ಪ್ರವಹತಿ ಸತತಂ ಮತ್ಸುತಾ ಕೋಮಲಾಙ್ಗೀ ||

ತಾ|| ನನ್ನ ಈ ಕೋಮಲಾಙ್ಗಿಯು- ಸರ್ವತ್ರ ಸುಖದುಃಖೋತ್ಪಾದಕನೇ, ಅಶರಣ್ಯ ಶರಣ್ಯನೇ, ಕಾಲಚಕ್ರಾಧೀಶನೇ, ಸಮುದ್ರಶಾಯಿಯಾದ ಗಂಭೀರ ಸ್ವಭಾವನೇ, ಆಶ್ರಿತಸುಲಭನಾದ ಶ್ರೀಕೃಷ್ಣನೇ—ಎಂದು ಹೇಳುತ್ತ, ಶ್ರೀರಂಗನಾಥನಾದ ನಿನ್ನನ್ನೇ "ನನ್ನ ಅವಗಾಹನ ಸ್ನಾನಕ್ಕೆ ತೀರ್ಥರೂಪನೇ" ಎಂದು ಸ್ಮರಿಸುತ್ತ, ಬಾಷ್ಪಭರಿತವಾದ ನೇತ್ರಗಳುಳ್ಳವಳಾಗುತ್ತಿದಾಳೆ.

(೮) ಕೊೞುನ್ದು ವಾನವರ್‌ಕಳ್ಕ್ಕೆನ್ನುಮ್ ಕುನ್ಱೇನ್ದಿ
ಕ್ಕೋನಿರೈಕಾತ್ತವನೆನ್ನುಮ್,
ಅೞುನ್ತೊೞುವಾವಿಯನಲ ವೆವ್ವುಯಿರ್‌ಕ್ಕುಮಞ್ಜನವಣ್ಣನೇ
ಯೆನ್ನುಮ್,
ಎೞುನ್ದು ಮೇಲ್‌ನೋಕ್ಕಿ ಯಿಮೈಪ್ಪಿಲಳಿರುಕ್ಕುಮೆಙ್ಗನೇ
ನೋಕ್ಕುಕೇನೆನ್ನುಮ್,
ಶೆೞುನ್ತಡಮ್‌ಪುನಲ್‌ಶೂೞ್ ತಿರುವರಙ್ಗತ್ತಾಯೆನ್
ಶೆಯ್‌ಕೇನೆನ್ ತಿರುಮಗಳ್ಕ್ಕೇ.

ಪ್ರ|| ವಾನವರ್ ಕಳ್ಕು-ನಿತ್ಯಸೂರಿಗಳಿಗೆ, ಕೊೞುನ್ದು-ಸ್ವಾಮಿಯಾದವನು, ಎನ್ನುಮ್ – ಎನ್ನುತ್ತಾಳೆ. ಕುನ್ಱು ಎನ್ದಿ – (ಗೋವರ್ಧನ) ಗಿರಿಯನ್ನು ಧರಿಸಿ, ಕೋನಿರೈ- ಪಶುಸಂಘಗಳನ್ನು, ಕಾತ್ತವನ್-ರಕ್ಷಿಸಿದವನು, ಎನ್ನುಮ್-ಎನ್ನುತ್ತಾಳೆ. ಅೞುಮ್-(ಭಕ್ತಿಪರವಶೆಯಾಗಿ) ಅಳುತ್ತಾಳೆ. ತೊೞುಮ್ - (ಪ್ರಪನ್ನರಂತೆ) ಅಂಜಲಿಮಾಡುತ್ತಾಳೆ. ಆವಿ ಅನಲ – ಆತ್ಮವಸ್ತು ದಗ್ಧವಾಗುವಂತೆ, ವೆವ್ವುಯಿರ್ ಕ್ಕುಮ್-(ಸನ್ತಾಪದಿಂದ) ಉಷ್ಣಶ್ವಾಸವನ್ನು ಬಿಡುವಳು, ಅಞ್ಜನವಣ್ಣನೇ-ಶ್ಯಾಮಳವರ್ಣನೇ, ಎನ್ನುಮ್-ಎನ್ನುತ್ತಾಳೆ. ಮೇಲ್ ಎೞುನ್ದು-ಮೇಲೆ ತಲೆಯೆತ್ತಿ, ನೋಕ್ಕಿ-ನೋಡಿ, ಇಮೈಪ್ಪು ಇಲಳ್ ಇರುಕ್ಕುಮ್ – ಕಣ್ಣುಮುಚ್ಚದೆ ಇರುವಳು. ಎಙ್ಙನೇನೋಕ್ಕುಕೇನ್-ಹೇಗೆ (ನಿನ್ನನ್ನು) ಕಾಣುವೆನು, ಎನ್ನುಮ್- ಎನ್ನುತ್ತಾಳೆ. ತೆೞುಮ್ ತಡಮ್ – ರಮ್ಯವಾಗಿ ಅಪಾರವಾದ, ಪುನಲ್ ಶೂೞ್-ಪ್ರವಾಹದಿಂದ ಪರಿವೃತವಾದ, ತಿರುವರಙ್ಗತ್ತಾಯ್-ಶ್ರೀರಂಗದಲ್ಲಿ ವಾಸಮಾಡುವವನೇ, ಎನ್ ತಿರುಮಕಳ್ಕು-ನನ್ನ ಈ ಮಗಳಿಗೆ, ಎನ್ ಶೆಯ್ಗೇನ್-(ನಾನು) ಏನು ಮಾಡಲಿ?

( ಸ-ಗಾ-ರ || )—

ಸೂರೀನ್ದ್ರೇತ್ಯಂಸಧೃಕ್ಷ್ಮಾವಃಶಿರಯವಚಲೋದ್ಧಾರಕೇ ಗೋಪತೀಶ್ವೇ-
ತ್ಯೇವಂ ಕ್ರನ್ದನ್ತ್ಯನಾಥಾ ಭಜತಿ ಚ ಬಹುಸನ್ತಾಪ-ನಿಶ್ವಾಸಶೀಲಾ |
ತಿಷ್ಠನ್ತೀ ನೀಲವರ್ಣೇತ್ಯಪಿ ಗಗನಮಿಯಂ ಪಶ್ಯತಿ ವ್ಯಾಯತಾಕ್ಷೀ
ತ್ವಾಂ ಪಶ್ಯೇಯಂ ಕಥಂ ವೇತ್ಯಪಿ ವದತಿ ವಿಭೋ! ರಙ್ಗರಾಟ್! ಕಿನ್ನು
ಕುರ್ಯಾಮ್ ? ||

ತಾ|| ನಿತ್ಯಸೂರೀಶ್ವರನೇ, ಗೋವರ್ಧನೋದ್ಧಾರಕನೇ, ಗೋ (ಸಙ್ಘ) ಪಾಲಕನೇ—ಎಂದು ಇವಳು ಮೊರೆಯಿಡುತ್ತ ಅಳುವಳು, ಅಂಜಲಿಮಾಡುವಳು, ಉಷ್ಣಶ್ವಾಸವಂ ಬಿಡುವಳು, ನೀಲಮೇಘಶ್ಯಾಮನೇ—ಎಂದು ಮೇಲೆ ತಲೆಯೆತ್ತಿ ನೋಡುತ್ತ ಕಣ್ಣುಮುಚ್ಚದೆ ಇರುವಳು. ಹೇಗೆ ನಿನ್ನನ್ನು ಕಾಣುವೆನು?—ಎಂದು ಶ್ರಾನ್ತೆಯಾಗುವಳು. ಈ ಪ್ರಕಾರ ಇರುವ ನನ್ನ ಕನ್ಯೆಗೆ ನಾನು ಏನು ಮಾಡಲಿ? ಶ್ರೀರಂಗನಾಥ!—(ಎಂದು ತಾಯಿಯು ಕೇಳುತ್ತಾಳೆ).

(೯) ಎನ್ ತಿರುಮಕಳ್‌ಶೇರ್‌ಮಾರ್ಬನೇ ಯೆನ್ನುಮ್
ಎನ್ನುಡೈಯಾವಿಯೇ ಯೆನ್ನುಮ್,
ನಿನ್ ತಿರುವೆಯಿರ್ಱಾಲಿಡನ್ದು ನೀಕೊಣ್ಡ
ನಿಲಮಕಳ್‌ಕೇಳ್ವನೇ ಯೆನ್ನುಮ್,
ಅನ್ರುರುವೇೞುಮ್ ತೞುವಿ ನೀಕೊಣ್ಡ ಆಯ್‌ಮಕಳನ್ಬನೇ
ಯೆನ್ನುಮ್,
ತೆನ್ ತಿರುವರಙ್ಗಮ್ ಕೋಯಿಲ್‌ಕೊಣ್ಡಾನೇ
ತೆಳಿಕಿಲೇನ್ ಮುಡಿವಿವಳ್‌ತನಕ್ಕೇ.

ಪ್ರ॥ ಎನ್ ತಿರುಮಕಳ್‌ಶೇರ್ ಮಾರ್ಬನೇ-ನನ್ನ ಸ್ವಾಮಿಯಾದ ಲಕ್ಷ್ಮೀಧರ ವಕ್ಷಸ್ಸ್ಥಲನೇ, ಎನ್ನುಮ್-ಎನ್ನುತ್ತಾಳೆ; ಎನ್ನುಡೈ ಆವಿಯೇ-ನನ್ನ ಪ್ರಾಣಭೂತನೇ, ಎನ್ನುಮ್-ಎನ್ನುತ್ತಾಳೆ; ನಿನ್‌ತಿರು ಎಯಿರ್ಱಾಲ್-ನಿನ್ನ ದಿವ್ಯವಕ್ತ್ರದಿಂದ, ಇಡನ್ದು-(ಪ್ರಳಯಕಾಲದಲ್ಲಿ) ಉದ್ಧರಿಸಿ, ನೀಕೊಣ್ಡ-ನೀನೇ ಸ್ವೀಕರಿಸಿದ, ನಿಲಮಕಳ್-ಭೂದೇವಿಗೆ, ಕೇಳ್ವನೇ-ನಾಯಕನೇ, ಎನ್ನುಮ್-ಎನ್ನುತ್ತಾಳೆ; ಅನ್ರು-ಆಗ, ಉರು ಏೞುಮ್-ವೃಷಭಗಳು ಏೞನ್ನೂ, ತೞುವಿ-ಸುಲಭವಾಗಿ ಜಯಿಸಿ (ಮರ್ದಿಸಿ), ನೀಕೊಣ್ಡ-ನೀನು ಸ್ವೀಕರಿಸಿದ, ಆಯ್‌ಮಕಳ್-(ನಪ್ಪಿನ್ನೈಯೆಂಬ) ನೀಳಾದೇವಿಗೆ, ಅನ್ಬನೇ-ವಲ್ಲಭನೇ, ಎನ್ನುಮ್-ಎನ್ನುವಳು. ತೆನ್ ತಿರುವರಙ್ಗಮ್-ದಕ್ಷಿಣದಲ್ಲಿರುವ ಶ್ರೀರಂಗಕ್ಷೇತ್ರವನ್ನು, ಕೋಯಿಲ್‌ಕೊಣ್ಡಾನೇ-ತನ್ನ ಆಲಯವನ್ನಾಗಿ ಮಾಡಿಕೊಂಡಿರುವವನೇ, ಇವಳ್ ತನಕ್ಕು - ಇವಳ ವಿಷಯದಲ್ಲಿ, ಮುಡಿವು-ಪರಿಣಾಮಪ್ರಕಾರವನ್ನು, ತೆಳಿಕಿಲೇನ್-(ನಾನು) ತಿಳಿಯಲಾರೆನು.

( ಸ-ಗಾ-ರ ॥ )—

ಮನ್ನಾಥ ! ಶ್ರೀಧರೋರಸ್ಸ್ಥಲ ! ಮಮ ಸಕಲಪ್ರಾಣರೂಪೇತಿ ವಕ್ತಿ
ಸ್ವೈರಂ ದಂಷ್ಟ್ರಾಗ್ರತೋ ಭೂಭರಣ! ವೃಷಜಯವ್ಯಾಢಗೋಪೀಪ್ರಿಯೇತಿ।
ಶ್ರೀಮದ್ರಙ್ಗಾಭಿಧಾನೇ ಕೃತನಿಜವಸತೇ! ದಕ್ಷಿಣೇಽಸ್ಮಿನ್ ಪುರೇ ತ್ವಂ
ನಿತ್ಯಂ ಬಾಲಾಭಾಷಿ ವಿಷ್ಣೋ! ತ್ವಯಿ ಸತತಮಿಯಂ ಮೋಹಿತಾ ಕಿಂ
ಭವೇದ್ವಾ ? ॥

ತಾ॥ ನನ್ನ ಸ್ವಾಮಿಯಾದ ಲಕ್ಷ್ಮೀಧರವಕ್ಷಸ್ಸ್ಥಲನೇ! ನನ್ನ ಪ್ರಾಣ ಭೂತನೇ! ಪ್ರಳಯಕಾಲೋದ್ಧೃತ ಭೂದೇವೀನಾಯಕನೇ! ಸಪ್ತವೃಷಭಮರ್ದನ ದಿಂದ ಸ್ವೀಕೃತೆಯಾದ ನೀಳಾದೇವಿಗೆ ವಲ್ಲಭನೇ!—ಎಂದು ನಿನ್ನನ್ನೇ ಸ್ಮರಿಸಿ ಕೂಗುತ್ತಿರುವಳು. ಶ್ರೀರಂಗಕ್ಷೇತ್ರನಾಥನೇ! ಇವಳ ಪರಿಣಾಮಪ್ರಕಾರವು ಏನೋ ತಿಳಿಯದೆ ನಾನು ಭ್ರಾನ್ತೆಯಾಗಿದೇನೆ. (ನೀನೇ ರಕ್ಷಿಸಬೇಕೆಂದು ಭಾವವು.)

(೧೦) ಮುಡಿವಿವಳ್ ತನಕ್ಕೊನ್ರರಿಕಿಲೇನೆನ್ನುಮ್
ಮೂವುಲಕಾಳಿಯೇ ಯೆನ್ನುಮ್,
ಕಡಿಕಮಳ್ ಕೊನ್ರೈ ಚ್ಚಡೈಯನೇ ಯೆನ್ನುಮ್
ನಾನ್ಮುಕಕ್ಕಡವುಳೇ ಯೆನ್ನುಮ್,
ವಡಿವುಡೈವಾನೋರ್ ತಲೈವನೇ ಯೆನ್ನುಮ್
ವಣ್ತಿರುವರಙ್ಗನೇ ಯೆನ್ನುಮ್,
ಅಡಿಯಡೈಯಾದಾಳ್ ಪೋಲಿವಳಣುಕಿ
ಯಡೈನ್ದನಳ್ ಮುಕಿಲ್ವಣ್ಣನಡಿಯೇ.

ಪ್ರ॥ ಇವಳ್-ಇವಳು, ತನಕ್ಕು - ಈ ಪ್ರಕಾರವಾಗಿರುವ ತನ್ನ ಅವಸ್ಥೆಗೆ, ಮುಡಿವು ಒನ್ರು-ಕೊನೆಯೊಂದನ್ನು, ಅರಿಕಿಲೇನ್-ತಿಳಿಯಲಾರೆನು, ಎನ್ನುಮ್-ಎನ್ನುತ್ತಾಳೆ; ಮೂವುಲಕು ಆಳಿಯೇ--ತ್ರೈಲೋಕ್ಯಾಧಿಪತಿಯಾದ ಇನ್ದ್ರನಿಗೆ ಅನ್ತರಾತ್ಮನಾದವನೇ, ಎನ್ನುಮ್-ಎನ್ನುತ್ತಾಳೆ; ಕಡಿಕಮಳ್ಕೊನ್ರೈ-ಪರಿಮಳ ಭರಿತವಾದ "ಕೊನ್ರೈ" ಎಂಬ ವೃಕ್ಷದ ಪುಷ್ಪಗಳುಳ್ಳ, ಶಡೈಯನೇ-ಜಟೆಯನ್ನು ಧರಿಸಿರುವ ರುದ್ರನಿಗೆ ಅನ್ತರ್ಯಾಮಿಯೇ, ಎನ್ನುಮ್-ಎನ್ನುತ್ತಾಳೆ; ನಾನ್ಮುಕಕ್ಕಡವುಳೇ-ಚತುರ್ಮುಖನಾದ ಬ್ರಹ್ಮನಿಗೆ ಅನ್ತರಾತ್ಮನೇ, ಎನ್ನುಮ್-ಎನ್ನುತ್ತಾಳೆ; ವಡಿವು ಉಡೈ-ತನಗೆ ಸಮಾನವಾದ ರೂಪಗಳುಳ್ಳ, ವಾನೋರ್-ನಿತ್ಯಸೂರಿಗಳಿಗೆ, ತಲೈವನೇ-ಸ್ವಾಮಿಯೇ!, ಎನ್ನುಮ್ - ಎನ್ನುತ್ತಾಳೆ; ವಣ್-ಉದಾರ ಸ್ವಭಾವ ನಾದ, ತಿರುವರಙ್ಗನೇ - ಶ್ರೀರಙ್ಗನಾಥನೇ!, ಎನ್ನುಮ್-ಎನ್ನುತ್ತಾಳೆ; ಅಡಿ ಅಡೈಯಾದಾಳ್ಪೋಲ್-ಅವನ ಪಾದಗಳನ್ನು ಹೊಂದದೆ ಇರುವವಳಂತೆ ಇದ್ದ, ಇವಳ್-ಇವಳು, ಮುಕಿಲ್ವಣ್ಣನ್ - ಕಾಲಮೇಘವರ್ಣನಾದ (ಉದಾರಸ್ವಭಾವ ವುಳ್ಳ) ಸ್ವಾಮಿಯ, ಅಡಿಯೇ-ಪಾದಗಳನ್ನೇ, ಅಣುಕಿ-ಸಮೀಪಿಸಿ, ಅಡೈನ್ದನಳ್-ಆಶ್ರಯಿಸಿದಳು.

( ಸ–ಗಾ–ರ || )—

ಅಸ್ಯಾ ದುಃಖಾನ್ತಕಂ ಕಿಂ ಮಮ ಭವತಿ ನ ವೇದ್ಮೀತಿ ವಕ್ತ್ರೀಯಮೇವ
ತ್ರೈಲೋಕ್ಯಾಧೀಶ! ಶಮ್ಭೋ! ವಿಕಚಸುಮಜಟಾಭೃಚ್ಚತುರ್ವಕ್ತ್ರ! ದೇವ ।
ಸೂರೀಣಾಂ ನಾಯಕೇತಿ ಸ್ವಯಮಿಯಮನಿಶಂ ರಙ್ಗನಾಥೇತಿ ವಕ್ತಿ
ಭ್ರಾನ್ತ್ಯೇವ ತ್ವತ್ಪದಾಬ್ಜೇ ಜಲದರುಚಿಯುತ! ಪ್ರಾಪ್ತಸತ್ತಾ ಚಕಾಸ್ತಿ ||

ತಾ|| ಇವಳು ತನ್ನ ಅವಸ್ಥೆಗೆ ಪರಿಣಾಮವು ಏನೋ ಎಂದು ಹೇಳುತ್ತ, "ಇನ್ದ್ರ-ರುದ್ರ-ಚತುರ್ಮುಖಾದಿಗಳಿಗೆ ಅನ್ತರಾತ್ಮನೇ! ನಿತ್ಯಸೂರೀಶ್ವರನೇ! ಶ್ರೀರಙ್ಗನಾಥನೇ!"—ಎಂದು ಕೂಗುತ್ತಿದಾಳೆ. ಕಾಲಮೇಘಸದೃಶನಾದಸ್ವಾಮಿಯ ಪಾದಗಳನ್ನೇ ಈಗ ಇವಳು ಹೊಂದಿ ಇರುತ್ತಾಳೆ.

(೧೧) ಮುಕಿಲ್ವಣ್ಣನಡಿಯೈ ಯಡೈನ್ದರುಳ್ಶೂಡಿ
ಯುಯ್ನ್ದವನ್ ಮೊಯ್ಮ್ಬುನಲ್ ಪ್ಪೊರುನಲ್,
ತುಕಿಲ್ವಣ್ಣ ತ್ತೂನೀರ್ಚ್ಚೇರ್ಪ್ಪನ್ ವಣ್ಪೊೞಿಲ್ಶೂೞ್
ವಣ್ಕುರುಕೂರ್ ಚ್ಚಡಕೋಪನ್,
ಮುಕಿಲ್ವಣ್ಣನಡಿಮೇಲ್ ಶೊನ್ನ
ಶೊಲ್ಮಾಲೈಯಾಯಿರತ್ತಿಪ್ಪತ್ತುಮ್ ವಲ್ಲಾರ್,
ಮುಕಿಲ್ವಣ್ಣ ವಾನತ್ತಿಮೈಯವರ್ಶೂೞ ವಿರುಪ್ಪರ್
ಪೇರಿನ್ಪವೆಳ್ಳತ್ತೇ.

ಪ್ರ|| ಮುಕಿಲ್ವಣ್ಣನ್-ಮೇಘವರ್ಣನಾದ ಸ್ವಾಮಿಯ (ಶ್ರೀರಙ್ಗನಾಥನ), ಅಡಿಯೈ-ಪಾದಗಳನ್ನು, ಅಡೈನ್ದು-ಹೊಂದಿ, ಅರುಳ್ - (ಅವನ) ಕೃಪೆಯನ್ನು, ಶೂಡಿ-ಶಿರಸಾವಹಿಸಿ, ಉಯ್ನ್ದವನ್-ಉಜ್ಜೀವಿಸಿದ, ಮೊಯ್ಮ್ಬುನಲ್-ಅಧಿಕವಾದ ನೀರುಳ್ಳ, ಪೊರುನಲ್ – ತಾಮ್ರಪರ್ಣೀನದಿಯ, ತುಕಿಲ್ವಣ್ಣಮ್-ವಸ್ತ್ರದಂತೆ ಶುಭ್ರವಾಗಿರುವ, ತೂನೀರ್-ಪರಿಶುದ್ಧವಾದ ಜಲವುಳ್ಳ, ಶೇರ್ಪ್ಪನ್-ಕ್ಷೇತ್ರಗಳಿಗೆ ಅಧಿಪತಿಯಾದ, ವಣ್ಪೊೞಿಲ್ ಶೂೞ್-ರಮ್ಯವಾದ ಉದ್ಯಾನಗಳಿಂದ ಕೂಡಿದ, ಕುರುಕೂರ್ ಶಡಕೋಪನ್-ಕುರುಕಾಪುರಿಯ ಶ್ರೀ ಶಠಾರಿಮುನಿಯು, ಮುಕಿಲ್ ವಣ್ಣನ್ ಅಡಿಮೇಲ್-ನೀಲಮೇಘವರ್ಣನಾದ ಸ್ವಾಮಿಯ ಪಾದಗಳನ್ನು ಕುರಿತು, ಶೊನ್ನ-ರಚಿಸಿದ, ಶೊಲ್ಮಾಲೈ ಆಯಿರತ್ತು-ಪದ್ಯಮಾಲಾತ್ಮಕವಾದ ಸಹಸ್ರದಲ್ಲಿ,

ಇಪ್ಪತ್ತುಮ್ - ಈ ದಶಕವನ್ನು, ವಲ್ಲಾರ್-ಬಲ್ಲವರು, ಮುಕಿಲ್ವಣ್ಣಾ - (ಶ್ರೀ ವೈಕುಣ್ಠನಾಥನ ದಿವ್ಯಮಙ್ಗಳ ವಿಗ್ರಹಕಾನ್ತಿಯಿಂದ) ಮೇಘವರ್ಣವುಳ್ಳ ವಾನತ್ತು-ಪರಮಪದದಲ್ಲಿ, ಇಮೈಯವರ್-ನಿತ್ಯಸೂರಿಗಳು, ಶೂழ-ಸುತ್ತಲೂ ಇರಲು, ಪೇರ್ ಇನ್ಬವೆಳ್ಳತ್ತೇ-ಮಹಾನನ್ದಸಮುದ್ರದಲ್ಲಿ, ಇರುಪ್ಪರ್-ಮಗ್ನರಾಗಿ ಸನ್ತುಷ್ಟರಾಗುವರು.

( ಸ-ಗಾ-ರ || )---

ಮೇಘಶ್ಯಾಮಾಙ್ಘ್ರಿಯುಗ್ಮಂ ಶರಣಮುಪಗತಶ್ಶ್ರೀಶಠಾರಿಸ್ಸ್ವಪುರ್ಯಾಂ
ವೃಕ್ಷಾವಳ್ಯಮ್ಬುಧಾರಾದ್ಯವತರಣತಲೇ ದಿವ್ಯಸಾಹಸ್ರಕರ್ತಾ |
ವಿಷ್ಣೋಸ್ಸ್ತುತ್ಯೈ ವಿದುರ್ಯೇ ದಶಕಮಿದಮಮೀ ದಿವ್ಯಸೂರೀನ್ದ್ರಧಾಮ್ನಿ
ಪ್ರಾಪ್ಯ ಸ್ಥಾನಂ ಪರಂ ತತ್ ಸತತಮಪಿ ಭವನ್ತ್ಯದ್ಭುತಾನನ್ದಸಿನ್ಧೌ ||

ತಾ|| ಮೇಘವರ್ಣನಾದ ಶ್ರೀರಙ್ಗನಾಥನ ಪಾದಗಳನ್ನು ಹೊಂದಿ, ಅವನ ಕೃಪೆಯನ್ನು ಶಿರಸಾವಹಿಸಿ, ತಾಮ್ರಪರ್ಣೀನದೀ ಜಲಭರಿತವಾದ ಉದ್ಯಾನಗಳಿಂದ ಕೂಡಿದ ಕುರುಕಾಪುರಿಗೆ ನಿರ್ವಾಹಕರಾದ ಶ್ರೀ ಶಠಾರಿಮುನಿಯಿಂದ ವಿರಚಿತವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಬಲ್ಲವರು ಪರಮಪದದಲ್ಲಿ ನಿತ್ಯಸೂರಿಗೋಷ್ಠಿಯಲ್ಲಿ ಪರಮಾನನ್ದಸಿನ್ಧುಮಗ್ನರಾಗುವರು.

( ದ್ರ-ಉ-ಸಂ || )---

ಆತ್ಮಪ್ರಬನ್ಧಮುಪಸಮಾಪ್ಯ ಹಿತಂ ಜನಾನಾ-
ಮಾತ್ಮೇಷ್ಟಮುಕ್ತ್ವಮತಯಾ ಹರಿಣಾ ಪ್ರದಾತುಮ್ |
ಶ್ರೀರಙ್ಗಿಣಾಽಪ್ಯಸುಕಪ್ರಶಮಾರ್ಥಚಿನ್ತಾಂ
ಭೂಯಸ್ತ್ವಭಾವ ರತಿಮಾಪ ಮುನಿರ್ದ್ವಿತೀಯೇ ||

( ದ್ರ-ಉ-ತಾ-ರ || )---

ಶ್ರೀರಙ್ಗೇ ಸನ್ನಿಧಾನಾನ್ನಿಖಿಲಜಗದನುಸೃಷ್ಟ್ಯುತಾದ್ಯೈಶ್ಚ ಚಿತ್ರಾ-
ದ್ವಿಧ್ವಸ್ತಾನಿಷ್ಟಭಾವಾದುರಗಶಯನತಃ ಪುಂಸ್ಸು ಕರ್ಮಾನುರೂಪಮ್ |
ಶರ್ಮಾಶರ್ಮಪ್ರದಾನಾಜ್ಜಲದತನುತಯೋಪಕ್ರಿಯಾತತ್ಪರತ್ವಾತ್
ಸ್ವಾಮಿತ್ವಾಸ್ಸ್ವಾನಾಂ ವಿಗರ್ಹಾಮಪಶಮಯತಿ ಚೇತ್ಯಾಹ ಧೀಮಾನ್ ಶಠಾರಿಃ ||

(ಈ ದ್ವಿತೀಯ ದಶಕದ ಸಾರಾಂಶ) —

ಈ ಎರಡನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಶ್ರೀಭಗವದ್ವಿಶ್ಲೇಷವಂ ಸಹಿಸಲಾರದೆ ಅನುಭವಿಸುವ ಪ್ರಕಾರಗಳನ್ನೆಲ್ಲಾ ಈ ನಾಯಕಿಯ ತಾಯಿಯು ಶ್ರೀರಂಗನಾಥನನ್ನು ಕುರಿತು ವಿಜ್ಞಾಪಿಸಿ, "ಇವಳ ವಿಷಯದಲ್ಲಿ ಏನುಮಾಡಬೇಕೆಂದು ನೀನು ಆಲೋಚಿಸಿರುತ್ತೀಯೆ? ಇವಳ ಪರಿಣಾಮವೇನಾಗುವುದು? ಇವಳಿಗೆ ನಾನೇನುಮಾಡಲಿ?"—ಎಂದು ನಾನಾ ಪ್ರಕಾರಗಳಿಂದ ತನ್ನ ಸನ್ತಾಪವನ್ನು ತಿಳಿಸಿ, ಇವಳು ಅವನ ಪಾದಗಳನ್ನೇ ಹೊಂದಿದಾಳೆಂದು ನಿರ್ಣಯಿಸಿರುತ್ತಾಳೆ.

———:❀:———

ಶ್ರೀಃ

## ಸಪ್ತಮಶತಕದಲ್ಲಿ—ತೃತೀಯದಶಕ.

(ವೆಳ್ಳೈಚ್ಚುರಿಶಙ್ಗು—)

(ಈ ದಶಕದಲ್ಲಿ—ಶ್ರೀ ಶಠಾರಿಯೆಂಬ ನಾಯಕಿಯು ಶ್ರೀ ಕುರುಕಾಪುರೀ ಸಮೀಪದಲ್ಲಿರುವ "ತೆನ್ ತಿರುಪ್ಪೇರೈ" ಯೆಂಬ ದಿವ್ಯದೇಶದ ಶ್ರೀಮಕರಾಯತಕರ್ಣಪಾಶಸ್ವಾಮಿಯಲ್ಲಿ ವ್ಯಾಮೋಹವುಳ್ಳವಳಾಗಿ ಅಲ್ಲಿಗೆ ಹೋಗಬೇಕೆಂದು ನಿಶ್ಚಯಿಸಿ, ತನ್ನ ಸಖೀಜನ—ಮಾತೃವರ್ಗಾದಿಗಳನ್ನು ಕುರಿತು ತನ್ನ ಮನೋರಥವನ್ನು ತಿಳಿಸುತ್ತಾಳೆ.)

———

(೧) ವೆಳ್ಳೈಚ್ಚುರಿಶಙ್ಗೊಡಾಳಿಯೇನ್ದಿ
ತಾಮರೈಕ್ಕಣ್ಣನೆನ್ನೆಞ್ಜಿನೂಡೇ,
ಪುಳ್ಳೈಕ್ಕಡಾಕಿನ್ಱವಾಱ್ಱೈ ಕ್ಕಾಣೀರೆನ್ಶೊಲ್ಲಿ
ಚ್ಚೊಲ್ಲುಕೇನನ್ನೈಮೀರ್ಕಾಳ್,
ವೆಳ್ಳಚ್ಚುಕಮವನ್ ವೀಱ್ಱಿರುನ್ದ ವೇದವೊಲಿಯುಮ್
ವಿೞಾವೊಲಿಯುಮ್,
ಪಿಳ್ಳೈಕ್ಕುೞಾವಿಳೈಯಾಟ್ಟೊಲಿಯುಮಱಾ
ತ್ತಿರುಪ್ಪೇರೆಯಿಲ್ ಶೇರ್ವನ್ ನಾನೇ.

ಪ್ರ॥ ಅನ್ನೈಮೀರ್ಕಾಳ್ - ಜನನಿಯರೇ, ವೆಳ್ಳೈ-ಬಿಳುಪುವರ್ಣವನ್ನೂ, ಶುರಿ - ಒಳಗೆ ಆಳವಾಗಿ ಸುತ್ತುಗಳನ್ನೂ ಉಳ್ಳ, ಶಙ್ಗೊಡು-ಶ್ರೀಪಾಞ್ಚಜನ್ಯವೆಂಬ ಶಙ್ಖದೊಡನೆ, ಆೞಿ-ಚಕ್ರವನ್ನೂ, ಏನ್ದಿ-ಧರಿಸಿ, ತಾಮರೈಕ್ಕಣ್ಣನ್-ತಾವರೆಯಂತೆ ಕಣ್ಣುಗಳುಳ್ಳ ಸ್ವಾಮಿಯು, ಎನ್ ನೆಞ್ಜಿನೂಡೇ-ನನ್ನ ಮನಸ್ಸಿನೊಳಗೆ, ಪುಳ್ಳೈ-ಗರುಡನನ್ನು, ಕಡಾಕಿನ್ಱ ಆಱ್ಱೈ-ನಡೆಸುವ ಪ್ರಕಾರವನ್ನು, ಕಾಣೀರ್-ನೀವು ಕಾಣಿರಿ. ಎನ್ ಶೊಲ್ಲಿ-ನಾನು ಏನು ಹೇಳಿ, ಶೊಲ್ಲುಕೇನ್ (ಅದನ್ನು) ವರ್ಣಿಸಲಿ ? ವೆಳ್ಳಚ್ಚುಕಮ್ - ಸಮುದ್ರಪ್ರಾಯವಾದ (ಅಪಾರವಾದ) ಭಗವದನುಭವ ಸುಖವುಳ್ಳ, ಅವನ್ ವೀಱ್ಱಿರುನ್ದ - ಅವನು ತನ್ನ ಮಹಿಮೆಯೊಡನೆ ವಾಸಮಾಡುವ, ವೇದವೊಲಿಯುಮ್ - ವೇದಘೋಷವೂ, ವಿೞಾವೊಲಿಯುಮ್-ಉತ್ಸವ ವಾದ ಘೋಷವೂ, ಪಿಳ್ಳೈಕ್ಕುೞಾ-ಬಾಲಕರ ಸಂಘವು, ವಿಳೈಯಾಟ್ಟೊಲಿಯುಮ್-ಆಟ ಆಡುವ (ಲೀಲಾ) ಘೋಷವೂ, ಅಱಾ - ಅವಿಚ್ಛಿನ್ನವಾಗಿ ಬೆಳೆಯುತ್ತಿರುವ, ತಿರುಪ್ಪೇರೆಯಿಲ್-ಶ್ರೀ ಬೇರಪುರದಲ್ಲಿ, ನಾನ್ ಶೇರ್ವನ್-ನಾನು ಹೋಗಿ ಸೇರುವೆನು. (ಇದೇ ನನ್ನ ನಿಶ್ಚಯ).

( ಸಂಗ್ರಹ ॥ )—

ಯಾಯಂ ನ್ನೈವ ಹಿ ವಿಶ್ವ ಮಾತರ ಇದಂ ಶ್ರೀಶಙ್ಖಚಕ್ರೇ ವಹನ್
ಪದ್ಮಾಕ್ಷೋ ಹೃದಿ ಮೇಽತ್ರ ತಾರ್ಕ್ಷ್ಯಮಧಿರುಹ್ಯಾಸ್ತೇ ಚ ಸಞ್ಚಾರವಾನ್ ।
ಕೈಃ ಶಬ್ದೈರಿಹ ವರ್ಣಯಾಮಿ ಸುಸುಖಾವಾಸಂ ಹರೇಸ್ತಸ್ಯ ತು
ಶ್ರೀಬೇರಾಖ್ಯಪುರಂ ಭಜೇ ಶ್ರುತಿರವೈರ್ಯುಕ್ತಂ ಚ ವಾದ್ಯಾರವೈಃ ॥

ತಾ॥ ಶುಭ್ರವಾಗಿಯೂ, ಅಗಾಧ ಸುವೃತ್ತಾಕಾರವಾಗಿಯೂ ಇರುವ ಶಂಖದೊಡನೆ ಚಕ್ರವನ್ನೂ ಧರಿಸಿರುವ ಕಮಲನೇತ್ರನಾದ ಸ್ವಾಮಿಯು ನನ್ನ ಹೃದಯದಲ್ಲಿ ಪ್ರವೇಶಿಸಿ ಗರುಡನನ್ನು ನಡೆಸುವ ವಿಚಿತ್ರಪ್ರಕಾರವನ್ನು ನೀವು ಕಾಣಿರಿ. ಈ ವಿಚಿತ್ರವನ್ನು ನಾನು ಏನೆಂದು ವರ್ಣಿಸಲಿ? ಭಗವದನುಭವ ಸುಖದಿಂದ ಭರಿತವಾಗಿಯೂ, ವೇದಘೋಷ — ಉತ್ಸವವಾದ್ಯಘೋಷ — ಬಾಲಲೀಲಾ ಘೋಷಾದಿಗಳಿಂದ ಪೂರ್ಣವಾಗಿಯೂ, ಅವನಿಗೆ ವಾಸಸ್ಥಾನವಾಗಿಯೂ ಇರುವ ಶ್ರೀಬೇರಪುರದಲ್ಲಿ ನಾನು ಹೋಗಿ ಸೇರುವೆನು. (ಇದು ನಿಶ್ಚಯ.)

(೨) ನಾನಕ್ಕರುಙ್ಕುೞಲ್ ತೋೞಿಮಾರ್ಕಳನ್ನೈಯರ್
ಕಾಳಯಱ್ಚ್ಚೇರಿಯೀರ್ಕಾಳ್,
ನಾನಿತ್ತನಿನೆಞ್ಜಮ್ ಕಾಕ್ಕಮಾಟ್ಟೇನೆ೯ ವಶಮನ್ಱಿ–
ದಿರಾಪ್ಪಕಲ್ ಪೋಯ್,
ತೇ೯ಮೊಯತ್ತ ಪೂಮ್ಪೊೞಿಲ್ ತಣ್ಪಣೈಶೂೞ್
ತೇ೯ತಿರುಪ್ಪೇರೆಯಿಲ್ ವೀಱ್ಱಿರುನ್ದ,
ವಾನಪ್ಪಿರಾ೯ ಮಣಿವಣ್ಣ೯ ಕಣ್ಣ೯ ಶೆಙ್ಗನಿವಾಯಿ೯
ತಿಱತ್ತದುವೇ.

ಪ್ರ॥ ನಾನ-ಪರಿಮಳದ್ರವ್ಯ (ತೈಲಾದಿ) ಗಳಿಂದ ಅಲಂಕೃತವಾದ, ಕರುಙ್ಕುೞಲ್-ನೀಲವಾದ ಕೇಶಗಳುಳ್ಳ, ತೋೞಿಮಾರ್ಕಾಳ್ – ಸಖಿಯರೇ, ಅನ್ನೈಯರ್ಕಾಳ್-ಜನನಿಯರೇ, ಅಯಲ್ ಶೇರಿಯೀರ್ಕಾಳ್ – ಪಕ್ಕದ ಬೀದಿಯಲ್ಲಿ ವಾಸಮಾಡುವವರೇ, ನಾ೯-ನಾನು, ತನಿ-ಸ್ವತನ್ತ್ರವಾದ, ಇ ನೆಞ್ಜಮ್-ಈ ಮನಸ್ಸನ್ನು, ಕಾಕ್ಕಮಾಟ್ಟೇ೯ – ರಕ್ಷಿಸಲಾರೆನು (ತಡೆಯಲಾರೆನು). ಎ೯ ವಶಮನ್ಱು–(ಇದು) ನನ್ನ ವಶದಲ್ಲಿ ಇಲ್ಲ. ಇದು–ಇದು, ಇರಾ ಪಕಲ್-ರಾತ್ರಿಯೂ ಹಗಲೂ, ಪೋಯ್-ಹೋಗಿ, ತೇ೯ಮೊಯ್‌ತ್ತ-ಭ್ರಮರಗಳಿಂದ ಭರಿತವಾದ, ಪೂಮ್ಪೊೞಿಲ್-ಪುಷ್ಪೋದ್ಯಾನಗಳುಳ್ಳ, ತಣ್ ಪಣೈಶೂೞ್ – ಶೀತಳವಾದ ಸಸ್ಯಾದಿಕ್ಷೇತ್ರಗಳಿಂದ ಪರಿವೃತವಾದ, ತೇ೯ತಿರುಪ್ಪೇರೆಯಿಲ್-“ತೆ೯ ತಿರುಪ್ಪೇರೈ”—ಎಂಬ ಶ್ರೀಬೇರಪುರದಲ್ಲಿ, ವೀಱ್ಱಿರುನ್ದ–ವಾಸಮಾಡುತ್ತಿರುವ, ವಾನಪ್ಪಿರಾ೯–ಪರಮಪದನಾಥನೆಂಬ ಸ್ವಾಮಿಯಾದ, ಮಣಿವಣ್ಣ೯–ನೀಲಮಣಿವರ್ಣನಾದ, ಕಣ್ಣ೯–ಶ್ರೀಕೃಷ್ಣನ, ಶೆಮ್ ಕನಿವಾಯಿ೯–ಕೆಂಪಾದ ಬಿಮ್ಬಫಲದಂತಿರುವ ಅಧರ ಪುಟದಕಾನ್ತಿಯಲ್ಲಿ, ತಿಱತ್ತದು-ಸಕ್ತವಾಗಿದೆ. (ನನ್ನ ಮನಸ್ಸು–ನನಗೆ ವಶವಾಗದೆ–ಅವನ ಬಿಂಬಾಧರದಲ್ಲಿ ಸಕ್ತವಾಗಿದೆ)

(ಸ–ಗಾ–ರ ||)—

ಹೇ ಸಖ್ಯಶ್ಶೃಣುತಾದ್ಯ ಮಾತರ ಇಮಾ ಯೂಯಂ ಚ ಪಾರ್ಶ್ವಸ್ಥಿತಾ
ಶ್ಚಿತ್ತಂ ನೈವ ಹಿ ಮೇ ವಶಂ ಮಮ ಸದಾ ದುರ್ನಿಗ್ರಹಂ ಭಾತಿ ಚ ।
ಸಕ್ತಂ ಭಾತ್ಯಧರೇ ಹಿ ಬಿಮ್ಬಸದೃಶೇ ನಕ್ತಂದಿವಂ ಶ್ರೀಪತೇ –
ಶ್ರೀಬೇರಾಖ್ಯಪುರೇ ಸ್ಥಿತಸ್ಯ ತು ಹರೇಃ ಕೃಷ್ಣಸ್ಯ ದೇವೇಶಿತುಃ ॥

ತಾ॥ ದಿವ್ಯಪರಿಮಳಭರಿತ ಕೇಶಾಲಂಕೃತೆಗಳಾದ ಸಖಿಯರೇ! ಜನನಿಯರೇ! ಪಕ್ಕದಬೀದಿಯಲ್ಲಿ ವಾಸಮಾಡುವ ಜನರೇ! ಕೇಳಿರಿ. (ನನ್ನನ್ನು ನೀವು ವೃಥಾ ನಿಂದಿಸಿ ಏನುಪ್ರಯೋಜನ?) ಈ ನನ್ನ ಮನಸ್ಸು ನನಗೆ ವಶವಾಗದೆ ಸ್ವತನ್ತ್ರವಾಗಿ ಹೋಗಿ ಅವನಲ್ಲಿ ಸೇರಿಬಿಟ್ಟಿದೆ. ಇದು ರಾತ್ರಿಯೂ ಹಗಲೂ ಹೋಗಿ, ಪುಷ್ಪೋದ್ಯಾನ-ಸಸ್ಯಕ್ಷೇತ್ರಾದಿ-ಪರಿವೃತವಾದ ಶ್ರೀಬೇರಪುರದಲ್ಲಿ ವಾಸಮಾಡುವ ಪರಮಪದನಾಥನಾದ ನೀಲಮಣಿವರ್ಣನಾದ ಆ ಶ್ರೀಕೃಷ್ಣನ ಬಿಂಬಾಧರಪುಟದಲ್ಲಿ ಸಕ್ತವಾಗಿ ಬಿಟ್ಟಿದೆ. (ನಾನೇನು ಮಾಡಲಿ?—ನಾನು ಅಲ್ಲಿಗೆ ಹೋಗಿಯೇ ತೀರಬೇಕು—ಎಂದು ಭಾವವು).

(೩) ಶೆಙ್ಗನಿವಾಯಿನ್ ಕಿಱತ್ತದಾಯುಮ್ ಶೆಂಶುಡರ್
ನೀಣ್ಮುಡಿ ತಾೞ್ನ್ದದಾಯುಮ್,
ಶಙ್ಗೊಡುಶಕ್ಕರಮ್ ಕಣ್ಡುಕನ್ದುಮ್
ತಾಮರೈಕ್ಕಣ್ಗಳುಕ್ಕಱ್ಱು ತೀರ್ನ್ದುಮ್,
ತಿಙ್ಗಳುನಾಳುಮ್ ವಿೞಾವೞಾದ ತೆನ್ತಿರುಪ್ಪೇರೈಯಿಲ್
ವೀಱ್ಱಿರುನ್ದ,
ನಙ್ಗಳ್ಪಿರಾನುಕ್ಕೆನ್ನೆಞ್ಜಮ್ ತೋೞೀ ನಾಣುಮ್
ನಿಱೈಯುಮಿೞನ್ದದುವೇ.

ಪ್ರ॥ ಶೆಮ್‌ಕನಿ – ಕೆಂಪಾದ ಬಿಂಬಫಲದಂತೆ, ಇನ್–ಭೋಗ್ಯವಾಗಿರುವ, ವಾಯ್–ಅಧರದಲ್ಲಿ, ಕಿಱತ್ತದಾಯುಮ್–ಸಕ್ತವಾಗಿಯೂ, ಶೆಮ್‌ಶುಡರ್–ರಮ್ಯವಾದ ಕಾನ್ತಿಯುಳ್ಳ, ನೀಳ್–ಉನ್ನತವಾದ, ಮುಡಿ-ಕಿರೀಟದಲ್ಲಿ, ತಾೞ್ನ್ದದಾಯುಮ್–ವಶ್ಯವಾಗಿ ನಿಂತಿರುವುದಾಗಿಯೂ, ಶಙ್ಗೊಡುಶಕ್ಕರಮ್–ಶಂಖಚಕ್ರಗಳನ್ನು, ಕಣ್ಡು ಉಕನ್ದುಮ್–ಕಂಡು ಸನ್ತುಷ್ಟವಾಗಿ, ತಾಮರೈಕಣ್‌ಕಳುಕ್ಕು–ತಾವರೆಯಂತೆ ಇರುವ ಕಣ್ಣುಗಳಿಗೇ, ಅಱ್ಱುತ್ತೀರ್‌ನ್ದುಮ್–(ಅನನ್ಯಾರ್ಹವಾಗಿ) ಅತ್ಯನ್ತವಶ್ಯವಾಗಿಯೂ ಇರುವ, ಎನ್ ನೆಞ್ಜಮ್ – ನನ್ನ ಮನಸ್ಸು, ತೋೞೀ–ಸಖಿಯೇ! ತಿಙ್ಗಳುಮ್‌ನಾಳುಮ್–ಮಾಸಗಳಲ್ಲಿಯೂ ದಿನಗಳಲ್ಲಿಯೂ ಅವಿಚ್ಛಿನ್ನವಾಗಿ, ವಿೞಾ–ಉತ್ಸವಗಳು, ಅೞಾದ–ತಪ್ಪದೆ ನಡೆಯುತ್ತಿರುವ, ತೆನ್ ತಿರುಪ್ಪೇರೈಯಿಲ್–ಶ್ರೀಬೇರಪುರದಲ್ಲಿ, ವೀಱ್ಱಿರುನ್ದ – ವಾಸಮಾಡುತ್ತಿದ್ದ, ನಙ್ಗಳ್‌ಪಿರಾನುಕ್ಕು–ನಮ್ಮ ಸ್ವಾಮಿಗೆ, ನಾಣುಮ್–ಲಜ್ಜೆಯನ್ನೂ, ನಿಱೈಯುಮ್–ಶೀಲವನ್ನೂ, ಇೞನ್ದದುವೇ–ಒಪ್ಪಿಸಿ (ಬಿಟ್ಟೇ) ಬಿಟ್ಟಿತು (ನಾನು ಈಗ ಲಜ್ಜಾಶೀಲಾದಿಗಳನ್ನು ಬಿಟ್ಟೇ ಇರುತ್ತೇನೆಂದು ಭಾವವು)

( ಸ-ಗಾ-ರ || )—

ಮಚ್ಚಿತ್ತಂ ಸತತಂ ಚ ಸಕ್ತಮಧರೇ ಬಿಮ್ಬಾಯಿತೇ ಶ್ರೀಹರೇ-
ರ್ಭಾಸ್ವನ್ಮೌಳಿತಲೇ ಚ ಪದ್ಮನಯನೇ ಶ್ರೀಶಙ್ಖಚಕ್ರದ್ವಯೇ ।
ಚಿತ್ತಂ ಮೇ ಸಖಿ ಮಾಸವಾಸರಮಹಾದಿವ್ಯೋತ್ಸವೈರಾವೃತೇ
ಶ್ರೀಬೇರಾಖ್ಯಪುರೇ ಸ್ಥಿತೇ ಭಗವತಿ ನ್ಯಸ್ತಂ ಹಿ ಲಜ್ಜಾಂ ವಿನಾ ||

ತಾ|| ಎಲೈ ಸಖಿಯೇ ! ನನ್ನ ಮನಸ್ಸು ಅವನ ಬಿಂಬಾಧರದಲ್ಲೂ, ದಿವ್ಯೋನ್ನತ ಕಿರೀಟದಲ್ಲೂ, ಶಂಖಚಕ್ರಗಳಲ್ಲೂ, ನೇತ್ರಾರವಿಂದದ್ವಯದಲ್ಲೂ, ಅನವರತ ಸಕ್ತವಾಗಿದೆ. ಈಗ ನನ್ನ ಮನಸ್ಸು ಮಾಸೋತ್ಸವ-ದೈನನ್ದಿನೋತ್ಸವ-ಶೋಭಿತವಾದ ಶ್ರೀಬೇರಪುರದ ಸ್ವಾಮಿಯ ವಿಷಯದಲ್ಲಿ ಅತ್ಯನ್ತಪ್ರವಣವಾಗಿ ಲಜ್ಜೆಯನ್ನೂ ಶೀಲವನ್ನೂ ಅವನಿಗೇ ಒಪ್ಪಿಸಿ ಬಿಟ್ಟಿದೆ. (ಈಗ ನನಗೆ ಲಜ್ಜಾಶೀಲಾದಿಗಳು ಇಲ್ಲವೇ ಇಲ್ಲವೆಂದು ಭಾವವು)

(೪) ಇೞನ್ದವೆಮ್ಮಾಮೈ ತ್ತಿಱತ್ತು ಪ್ಪೋನ
ಎನ್ನೆಞ್ಜಿನಾರುಮಙ್ಗೇ ಯೊೞಿನ್ದಾರ್,
ಉೞನ್ದಿನಿಯಾರೈಕ್ಕೊಣ್ಡೆನ್ನುಶಾಕೋ
ಓದಕ್ಕಡಲೊಲಿಪ್ಪೋಲ, ಎಙ್ಗುಮ್
ಎೞುನ್ದನಲ್ವೇದತ್ತೊಲಿ ನಿನ್ಱೋಙ್ಗು
ತೆನ್ತಿರುಪ್ಪೇರೆಯಿಲ್ ವೀಱಿರುನ್ದ,
ಮೞೈಮುಗಿಲ್ ವಣ್ಣನ್ ಮಾಯತ್ತಾಲ್ ಅನ್ದೋ
ನನ್ನ್ಯುಯರ್ಕಾಳೆನ್ನೈ ಯೆನ್ಮುನಿನ್ದೇ.

ಪ್ರ|| ಇೞನ್ದ-ಮೊದಲು ನಾನು ಕಳೆದುಕೊಂಡಿದ್ದ, ಎಮ್ಮಾಮೈತ್ತಿಱತ್ತು ಪ್ಪೋನ-ನನ್ನ ಶೀಲವನ್ನು ಹುಡುಕುವುದಕ್ಕಾಗಿ ಹೋದ, ಎನ್ನೆಞ್ಜಿನಾರುಮ್-ನನ್ನ ಮನಸ್ಸೆಂಬ ಮಿತ್ರವರ್ಯರೂ, ಅಙ್ಗೇ ಒೞಿನ್ದಾರ್- ಅಲ್ಲಿಯೇ ಹೋಗಿ ನಿಂತು ಬಿಟ್ಟರು. ಇನಿ-ಅನ್ತರಂಗನಾದ ಮನಸ್ಸು ಹೋದಮೇಲೆ, ಉೞನ್ದು-ಸನ್ತಾಪಪಟ್ಟು, ಆರೈಕ್ಕೊಣ್ಡು - ಯಾರೊಡನೆ, ಎನ್ ಉಶಾಕೋ-ನನ್ನ ಸನ್ತಾಪವನ್ನು ಹೇಳಿಕೊಳ್ಳಲಿ ? (ಯಾವವಿಧವಾಗಿ ನಾನು ಪರಿಹಾರವನ್ನು ಹುಡುಕಲಿ ?) ಓದ-ಅಲೆಗಳುಳ್ಳ, ಕಡಲ್ ಒಲಿಪೋಲ-ಸಮುದ್ರದ ಘೋಷದಂತೆ, ಎಙ್ಗುಮ್ ಎೞುನ್ದ-

ಸರ್ವತ್ರ ವ್ಯಾಪಿಸಿದ, ನಲ್‌ವೇದತ್ತು ಒಲಿ–ಸಾಮವೇದಘೋಷವು, ನಿನ್ಱು ಓಙ್ಗ–ಸರ್ವಕಾಲದಲ್ಲೂ ಪ್ರವರ್ಧಮಾನವಾಗಿರುವ, ತೆನ್ ತಿರುಪ್ಪೇರೆಯಿಲ್–ಶ್ರೀಬೇರಪುರದಲ್ಲಿ, ವೀಱ್ಱಿರುನ್ದ–ಬಿಜಯಮಾಡಿರುವ, ಮುೞಙ್ಗು ಶಙ್ಗಕ್ಕೈಯನ್–ಮೊಳಗುವ ಧ್ವನಿಯುಳ್ಳ ಶಂಖವನ್ನು ಕೈಯಲ್ಲಿ ಧರಿಸಿರುವ ಸ್ವಾಮಿಯ, ಮಾಯತ್ತು–ಆಶ್ಚರ್ಯ ಚೇಷ್ಟಿತಗಳಲ್ಲಿ, ಆೞ್ನ್ದೇನ್–ಮಗ್ನೆಯಾದೆನು. ಅನ್ನೈಯರ್‌ಕಾಳ್–ಜನನಿಯರೇ, ಎನ್ನೈಮುನಿನ್ದು–ನನ್ನೊಡನೆ ಕೋಪಮಾಡಿ, ಎನ್–ಏನುಫಲ ?

( ಸ–ಗಾ–ರ || )—

ಚೇತೋ ಮತ್ಪ್ರಿಯಮನ್ತರಙ್ಗಮಹಹ! ಸ್ವೈರಂ ಹಿ ಸಕ್ತಂ ಬಹಿ–
ಸ್ತತ್ಪ್ರತ್ಯವಾಪ್ತ್ಯೈ ಕಿಮಸ್ತಿ ಸಾಧ್ಯಮಿಹ ಮೇ ಮಗ್ನೋಽಸ್ಮಿ ವೇದಸ್ವನೈಃ |
ಉದ್ಯದ್ವಾರಿಧಿಘೋಷರಾಜಿಸದೃಶೈರುದ್ವ್ಯಾಪಿತೇ ಶ್ರೀಹರೇ–
ಶ್ಶ್ರೀಬೇರಾಖ್ಯಪುರೇ ಸ್ಥಿತಸ್ಯ ಚರಿತೇ ಮಯ್ಯಾಗ್ರಹಾತ್ಕಿಂ ಫಲಮ್ ? ||

ತಾ|| ನನ್ನ ಶೀಲವು ನಷ್ಟವಾಯಿತೆಂದು ಅದನ್ನು ಹುಡುಕುವುದಕ್ಕಾಗಿ ಹೋದ ನನ್ನ ಮನಸ್ಸೂ ಕೂಡ ಅಲ್ಲಿಯೇ ಹೋಗಿ ನಿಂತುಬಿಟ್ಟಿತು. ಹೀಗೆ ನನ್ನ ಅನ್ತರಙ್ಗವಾದ ಮನಸ್ಸೇ ಹೋದಮೇಲೆ ನಾನು ಯಾರೊಡನೆ ನನ್ನ ಸನ್ತಾಪವನ್ನು ಹೇಳಿಕೊಳ್ಳಲಿ ? ಸಾಮವೇದ ಘೋಷಭೂಷಿತವಾದ ಶ್ರೀಬೇರಪುರದಲ್ಲಿ ವಾಸ ಮಾಡುವ ಶ್ರೀಪಾಂಚಜನ್ಯಧರನಾದ ಸ್ವಾಮಿಯ ಆಶ್ಚರ್ಯಕರವಾದ ಚೇಷ್ಟಿತಗಳಲ್ಲಿ ನಾನು ಮಗ್ನೆಯಾಗಿರುತ್ತೇನೆ. ಜನನಿಯರೇ ! ನೀವು ನನ್ನಮೇಲೆ ಕೋಪವಂ ಮಾಡಿದರೆ ಏನುಪ್ರಯೋಜನ ?

(೩) ಮುನಿನ್ದು ಶಕಟಮುದೈತ್ತು ಮಾಯಪ್ಪೇಯ್
ಮುಲೈಯುಣ್ಡು ಮರುದಿಡೈಪೋಯ್,
ಕನಿನ್ದವಿಳವುಕ್ಕು ಕನ್ಱೆಱಿನ್ದ ಕಣ್ಣಪಿರಾನುಕ್ಕೆನ್ ಪೆಣ್ಮೈ
ತೋಱ್ಱೇನ್,
ಮುನಿನ್ದಿನಿಯೆನ್ ಶೆಯ್‌ದೀರನ್ನೈಮಾರ್‌ಕಾಳ್
ಮುನ್ನಿಯವನ್ವನ್ದು ವೀಱ್ಱಿರುನ್ದ,
ಕನಿನ್ದ ಪೊೞಿಲ್ ತಿರುಪ್ಪೇರೆಯಿಱ್ಕೇ
ಕಾಲಮ್‌ಪೆಱವೆನ್ನೈ ಕ್ಕಾಟ್ಟುಮಿನೇ

ಪ್ರ|| ಮುನಿನ್ದು-ಕೋಪಮಾಡಿ, ಶಕಟಮುದೈತ್ತು-ಶಕಟಾಸುರನನ್ನು ಒದ್ದು ಮರ್ದಿಸಿ, ಮಾಯಪ್ಪೇಯ್ - ಮಾಯಾಪೂತನೆಯ, ಮುಲೈಯುಣ್ಡು-ಸ್ತನ್ಯಪಾನವಂಮಾಡಿ ಅವಳನ್ನು ಕೊಂದು, ಮರುದು ಇಡೈಪೋಯ್-ಯಮಳಾರ್ಜುನ ವೃಕ್ಷಗಳಮಧ್ಯೇ ನುಗ್ಗಿ, ಕನಿನ್ದ ವಿಳವುಕ್ಕು-ಪಕ್ವವಾದ ಹಣ್ಣುಗಳುಳ್ಳ ಅಸುರ ರೂಪಿಯಾದ ಬೇಲದಮರಕ್ಕೆ, ಕನ್ಱು ಎಱಿನ್ದ-ವತ್ಸರೂಪಿಯಾದ ಅಸುರನನ್ನು ಎತ್ತಿ ಬೀಸಿ ಎರಡನ್ನೂ ಕೊಂದ, ಕಣ್ಣಪಿರಾನುಕ್ಕು - ಕೃಷ್ಣಸ್ವಾಮಿಗೆ, ಎನ್ ಪೆಣ್ಮೈ ತೋಱ್ಱೇನ್-ನನ್ನ ಸ್ತ್ರೀತ್ವ ಶೀಲವನ್ನು ಸೋತೆನು. ಇನಿ-ಇನ್ನುಮೇಲೆ, ಅನ್ನೈಮಾರ್‌ಗಾಳ್-ಜನನಿಯರೇ, ಮುನಿನ್ದು-(ನನ್ನ ಮೇಲೆ) ಕೋಪಿಸಿಕೊಂಡು, ಎನ್ ಶೆಯ್‌ದೀರ್-ಏನುಮಾಡಿದಿರಿ? ಅವನ್-ಅವನು, ಮುನ್ನಿವನ್ದು-ಮುಂಚೆ ಬಂದು, ವೀಱ್ಱಿರುನ್ದ-ವಾಸಮಾಡುತ್ತಿದ್ದ, ಕನಿನ್ದ-ಪಕ್ವಫಲಭರಿತವಾದ, ಪೊೞಿಲ್-ಉದ್ಯಾನಗಳುಳ್ಳ, ತಿರುಪ್ಪೇರೆಯಿತ್ತಕ್ಕೇ - ಶ್ರೀಬೇರಪುರಕ್ಕೇ, ಎನ್ನೈಯ್-ನನ್ನನ್ನು, ಕಾಲಮ್ ಪೆಱ-ವಿಲಮ್ಬವಿಲ್ಲದಂತೆ (ಶೀಘ್ರವಾಗಿ), ಕಾಟ್ಟುಮಿನ್-ಕರೆದುಕೊಂಡು ಹೋಗಿ ತೋರಿಸಿರಿ.

( ಸ-ಗಾ-ರ || )—

ಕೋಪಾತ್ತಂ ಶಕಟಂ ಪ್ರಮರ್ದ್ಯ ಕುಮತಿಂ ತಾಂ ಪೂತನಾಂ ಧ್ವಂಸಯನ್,
ಮಧ್ಯೇ ವೃಕ್ಷಯುಗಸ್ಯ ಯಸ್ಸ್ವ ವಿಶತಿ ಕ್ಷಿಪ್ತ್ವಾ ಚ ವತ್ಸಾಸುರಮ್ |
ಕೃಷ್ಣಂ ತಂ ಪ್ರತಿ ಮೇ ಮನೋಽಸ್ತಿ ಸತತಂ ಲಜ್ಜಾವಿಹೀನಂ ತತಃ
ಕಿಂ ಮಯ್ಯಾಗ್ರಹತಃ ಫಲಂ? ತ್ಯಜತ ಮಾಂ ಶ್ರೀಬೇರಪುರ್ಯಾಂ ಕ್ಷಣಾತ್ ||

ತಾ|| ಕೋಪದಿಂದ ಶಕಟಾಸುರಮರ್ದನವಂಮಾಡಿ, ಪೂತನಾಸ್ತನ್ಯಪಾನವಂ ಮಾಡಿ ಅವಳನ್ನು ಕೊಂದು, ಯಮಳಾರ್ಜುನ ವೃಕ್ಷಗಳನು ಮುರಿದು, ವತ್ಸಾಸುರ ವಧವಂ ಮಾಡಿದ ಶ್ರೀಕೃಷ್ಣಸ್ವಾಮಿಗೆ ನನ್ನ ಸ್ತ್ರೀತ್ವ ಶೀಲವನ್ನು ನಾನು ಸೋತೆನು. ಜನನಿಯರೇ! ಇನ್ನುಮೇಲೆ ನೀವು ನನ್ನ ಮೇಲೆ ಕೋಪಮಾಡಿ ಏನು ಫಲ? ಅವನು ವಾಸಮಾಡುತ್ತಿರುವ ಫಲಭರಿತೋದ್ಯಾನಪರಿವೃತವಾದ ಶ್ರೀಬೇರಪುರಕ್ಕೇ ನನ್ನನ್ನು ಶೀಘ್ರವಾಗಿ ಕರೆದುಕೊಂಡುಹೋಗಿ ತೋರಿಸಿ ಪರಿಹಾರವನು ಹುಡುಕಿರಿ.

(೬) ಕಾಲಮ್ ಪೆಱ ವೆನ್ನೈಕ್ಕಾಟ್ಟುಮಿ೯ಕಳ್ ಕಾದಲ್
ಕಡಲಿ೯ ಮಿಕಪ್ಪೆರಿದಾಲ್,
ನೀಲಮುಕಿಲ್ ವಣ್ಣತ್ತೆಮ್ ಪೆರುಮಾ೯ ನಿಱ್ಕುಮ್
ಮುನ್ನೇವನ್ದೆ೯ ಕೈಕ್ಕುಮೆಯ್ದಾ೯,
ಞಾಲತ್ತವ೯ ವನ್ದು ವೀಱ್ಱಿರುನ್ದ ನಾನ್ಮಱೈಯಾಳರುಮ್
ವೇಳ್ವಿಯೋವಾ,
ಕೋಲಚ್ಚೆನ್ನೆಲ್ ಕಳ್ ಕವರಿವೀಶುಮ್ ಕೊಡುಪುನಲ್
ತಿರುಪ್ಪೇರ್ನೈಯಿತ್ತೇ.

ಪ್ರ॥ ನೀಲಮುಕಿಲ್ ವಣ್ಣತ್ತು-ಕಾಳಮೇಘವರ್ಣವುಳ್ಳ, ಎಮ್ ಪೆರುಮಾ೯-ನಮ್ಮ ಸ್ವಾಮಿಯು, ಮುನ್ನೇವನ್ದು ನಿಱ್ಕುಮ್-ನನ್ನಮುಂದೆ ಬಂದು ನಿಂತಿರುವನು, ಎ೯ ಕೈಕ್ಕುಮ್- ನನ್ನ ಕೈಗೂ, ಎಯ್ದಾ೯-ಸಿಕ್ಕದಂತೆ ದೂರದಲ್ಲಿದಾನೆ. (ಆದುದರಿಂದ) ಕಾದಲ್-ಆಶೆಯು, ಕಡಲಿ೯ ಮಿಕಪ್ಪೆರಿದಾಲ್ – ಸಮುದ್ರಕ್ಕಿಂತ ಅಪಾರವಾಗಿದೆಯಲ್ಲವೇ! ಞಾಲತ್ತುವನ್ದು-ಭೂಮಿಯಲ್ಲಿ ಪ್ರತ್ಯಕ್ಷವಾಗಿ ಬಂದು, ಅವ೯ ವೀಱ್ಱಿರುನ್ದ-ಅವನು ಬಿಜಯಮಾಡಿರುವ, ನಾನ್ಮಱೈಯಾಳರುಮ್-ನಾಲ್ಕು ವೇದಗಳನ್ನು ಪಠಿಸುವ ವಿಪ್ರರೂ, ವೇಳ್ವಿ ಓವಾ-ಅವರ ವೈದಿಕಕರ್ಮಗಳಲ್ಲಿ ಅವಿಚ್ಛಿನ್ನವಾಗಿ ಸಕ್ತರಾಗಿರುವ, ಕೋಲಚ್ಚೆನ್ನೆಲ್ ಕಳ್ – ರಮ್ಯವಾದ ಕೆಂಪು ಬತ್ತದಪೈರು, ಕವರಿವೀಶುಮ್ - ಚಾಮರದಂತೆ ಬೀಸುತ್ತಿರುವ, ಕೊಡುಪುನಲ್-ಅದಕ್ಕೆ ತಕ್ಕ ನೀರಿನ ಪ್ರವಾಹವುಳ್ಳ, ತಿರುಪ್ಪೇರ್ನೈಯಿತ್ತೇ – ಶ್ರೀಬೇರಪುರಕ್ಕೇ, ಎನ್ನೈ-ನನ್ನನ್ನು, ಕಾಲಮ್ ಪೆಱ-ಶೀಘ್ರವಾಗಿ, ಕಾಟ್ಟುಮಿ೯ಕಳ್-ಕರೆದುಕೊಂಡು ಹೋಗಿ ತೋರಿಸಿರಿ. (ಅಲ್ಲಿಯೇ ನನಗೆ ತಕ್ಕ ಪರಿಹಾರವಾದ ಔಷಧಿಯು ಇದೆ).

( ಸ-ಗಾ-ರ ॥ )—

ನೀಲಾಮ್ಭೋದನಿಭೋ ಹರಿರ್ಮಮ ಪುರಸ್ತಿಷ್ಠತ್ಯಹೋ! ದೂರತೋ
ಯಾತ್ಯೇವಾಸ್ಯ ಕರಾನ್ಮಮ ಸ್ವಯಮಿಯಂ ತೃಷ್ಣಾ ಸಮುದ್ರಾತ್ಯತಿಃ।
ಭೂಮ್ಯಾಮತ್ರ ಸ ವರ್ತತೇ ಕಿಲ ಚತುರ್ವೇದಾಶ್ರಯೈರ್ವೈದಿಕೈಃ
ಶ್ರೀಬೇರಾಖ್ಯಪುರೇ ತು ಸಸ್ಯಭರಿತೇ ತತ್ರೈವ ನೇಯಾಽಸ್ಮ್ಯಹಮ್ ॥

ತಾ॥ ನೀಲಮೇಘವರ್ಣನಾದ ನನ್ನ ಸ್ವಾಮಿಯು ನನ್ನಮುಂದೆ ಬಂದು ನಿಂತಿರುವನು. ನನ್ನ ಕೈಗೆ ಸಿಕ್ಕದೆ ದೂರದಲ್ಲಿದಾನೆ. ನನ್ನ ಆಶೆಯೋ ಸಮುದ್ರಕ್ಕಿಂತ ಅಧಿಕವಾಗಿ ಅಪಾರವಾಗಿದೆ, ಆದುದರಿಂದ—ಆವನ ವಾಸಸ್ಥಾನವಾಗಿಯೂ,

ಚತುರ್ವೇದಿ ವಿಪ್ರವರ್ಯರ ವೈದಿಕಕರ್ಮಗಳಿಂದ ಅವಿಚ್ಛಿನ್ನವಾಗಿ ಕೂಡಿದುದಾಗಿಯೂ, ರಮ್ಯವಾದ ಕೆಂಪುಬತ್ತದ ಪೈರುಗಳಿಂದ ಶೋಭಿತವಾಗಿಯೂ, ದಿವ್ಯಪ್ರವಾಹ ಭರಿತವಾಗಿಯೂ ಇರುವ ಶ್ರೀಬೇರಪುರಕ್ಕೇ ನನ್ನನ್ನು ಶೀಘ್ರವಾಗಿ ಕರೆದುಕೊಂಡು ಹೋಗಿ ತೋರಿಸಿ ತಕ್ಕ ಚಿಕಿತ್ಸೆಯನ್ನು ಮಾಡಿರಿ (ಅಲ್ಲಿಯೇ ನನಗೆ ತಕ್ಕ ದಿವ್ಯೌಷಧಿಯು ಇದೆಯೆಂದು ಭಾವವು.)

(೭) ಪೇರೆಯಿಲ್ ಶೂೞ್ ಕಡಲ್ ತೆನ್ನಿಲಙ್ಗೈ ಶೆಱ್ಱ
ಪಿರಾನ್ ವನ್ದು ವೀಱ್ಱಿರುನ್ದ,
ಪೇರೈಯಿಱ್ಕೇ ಪುಕ್ಕೆನ್ನೆಞ್ಜಮ್ ನಾಡಿ
ಪ್ಪೇರ್ತ್ತುವರವೆಙ್ಗುಮ್ ಕಾಣಮಾಟ್ಟೇನ್,
ಆರೈಯಿನಿ ಯಿಙ್ಗುಡೈಯಮ್ ತೋೞೀ ಯೆನ್ನೆಞ್ಜಮ್
ಕೂವವಲ್ಲಾರುಮಿಲ್ಲೈ,
ಆರೈಯಿನಿಕ್ಕೊಣ್ಡೆನ್ ಶಾದಿಕ್ಕಿನ್ಱದೆನ್ನೆಞ್ಜಮ್
ಕಣ್ಡದುವೇ ಕಣ್ಡೇನೇ.

ಪ್ರ॥ ಪೇರ್–ದೊಡ್ಡದಾದ, ಎಯಿಲ್–ಪ್ರಾಕಾರಗಳಿಂದ, ಶೂೞ್–ಪರಿವೃತವಾದ, ಕಡಲ್–ಸಮುದ್ರತೀರದಲ್ಲಿರುವ, ತೆನ್ ಇಲಙ್ಗೈ–ಸುಪ್ರಸಿದ್ಧವಾಗಿ ರಮ್ಯವಾದ (ದಕ್ಷಿಣದಿಕ್ಕಿನಲ್ಲಿರುವ) ಲಂಕಾನಗರವನ್ನು, ಶೆಱ್ಱ–ನಾಶಪಡಿಸಿದ, ಪಿರಾನ್–ಸ್ವಾಮಿಯು, ವನ್ದು–ಬಂದು, ವೀಱ್ಱಿರುನ್ದ–ಬಿಜಯಮಾಡಿ ಇದ್ದ, ಪೇರೈಯಿಱ್ಕೇ–ಶ್ರೀಬೇರಪುರಕ್ಕೇ, ಪುಕ್ಕು–ಹೋಗಿ ಪ್ರವೇಶಿಸಿ, ಎನ್ ನೆಞ್ಜಮ್–ನನ್ನ ಮನಸ್ಸು, ನಾಡಿ–(ಅವನನ್ನು) ಹುಡುಕಿ, ಪೇರ್ತ್ತು–ಹಿಂತಿರುಗಿ, ಎಙ್ಗುಮ್–ಎಲ್ಲಿಯೂ, ವರಕ್ಕಾಣಮಾಟ್ಟೇನ್–ಬರುವಂತೆ ನನಗೆ ಕಾಣುವುದಿಲ್ಲ. ಇನಿ–ಹೀಗಾದಮೇಲೆ, ತೋೞೀ–ಸಖಿಯೇ, ಇಙ್ಗು–ಈ ದಶೆಯಲ್ಲಿ, ಆರೈ–ಯಾರನ್ನು, ಉಡೈಯಮ್–(ನಾವು) ಸಹಾಯವಾಗಿ ಉಳ್ಳವರು ? (ನಮಗೆ ಯಾರು ಸಹಾಯಕರು ?) ಎನ್ ನೆಞ್ಜಮ್–(ಹೋದ) ನನ್ನ ಮನಸ್ಸನ್ನು, ಕೂವವಲ್ಲಾರುಮ್–ಕೂಗಬಲ್ಲವರೂ, ಇಲ್ಲೈ–ಇಲ್ಲ ಇನಿ–ಇನ್ನುಮೇಲೆ, ಆರೈಕ್ಕೊಣ್ಡು–ಯಾರನ್ನು ಹೊಂದಿ, ಎನ್ ಶಾದಿಕ್ಕಿನ್ಱದು–ಏನನ್ನು ಸಾಧಿಸಬಲ್ಲೆನು ? ಎನ್ ನೆಞ್ಜಮ್ – ನನ್ನ ಮನಸ್ಸು, ಕಣ್ಡದುವೇ–ಕಂಡ ವಿಷಯವನ್ನೇ, ಕಣ್ಡೇನೇ–ನಾನೂ ಕಂಡೆನು.

( ಸ-ಗಾ-೮ ॥ )—

ಪ್ರಾಕಾರಾವೃತವಾರ್ಧಿಸಂವೃತ-ಮಹಾಲಙ್ಕಾಪುರೀನಾಶಕ-
ಶ್ರೀಬೇರಾಖ್ಯಪುರೇಽಸ್ತಿ! ತತ್ರ ಹಿ ಮನೋ ಮೇ ಮಾರ್ಗಯತ್ಯೇವ ತಮ್।
ನಾಯಾತ್ಯೇವ ಕಿಲಾನ್ಯತಸ್ತು ಸಖಿ! ಮೇ ಕೇ ಸ್ಯುಸ್ಸಹಾಯಾ ಇಹ
ಭ್ರಾನ್ತಂ ಮೇಽದ್ಯ ಮನೋ ನ ಕೋಽಪಿ ಚ ಪುನಶ್ಚಾಹೂಯ
ಸಮ್ಭಾವಯೇತ್ ॥

ತಾ॥ ದೊಡ್ಡದಾದ ಪ್ರಾಕಾರಗಳಿಂದ ಪರಿವೃತವಾದ ಲಂಕಾಪುರಿಯನ್ನು ಧ್ವಂಸಮಾಡಿದ ಸ್ವಾಮಿಯು ಬಿಜಯಮಾಡಿ ಇರುವ ಶ್ರೀಬೇರಪುರಕ್ಕೇ ನನ್ನ ಮನಸ್ಸು ಹೋಗಿ ಪ್ರವೇಶಿಸಿ ಇದೆ. ಅವನನ್ನು ಹುಡುಕಿ ಹಿಂತಿರುಗಿ ಬರುವಂತೆ ನನಗೆ ಕಾಣುವುದಿಲ್ಲ (ಅಲ್ಲಿಯೇ ನಿಂತುಹೋಗಿದೆ.) ಎಲೈ ಸಖಿಯೇ! ಈ ದಶೆಯಲ್ಲಿ ನನಗೆ ಯಾರು ಸಹಾಯಕರು? ಹೊರಟುಹೋದ ನನ್ನ ಮನಸ್ಸನ್ನು ಹಿಂದಕ್ಕೆ ಕೂಗಬಲ್ಲವರೂ ಯಾರೂ ಇಲ್ಲ. ಇನ್ನುಮೇಲೆ ಯಾರನ್ನು ಆಶ್ರಯಿಸಿ ಏನನ್ನು ಸಾಧಿಸಬಲ್ಲೆನು? ನನ್ನ ಮನಸ್ಸುಹೋದ ದಾರಿಯನ್ನೇ ನಾನೂ ಕಂಡೆನು. (ನಾನೂ ಆ ಊರಿಗೇ ಹೋಗಲು ಯತ್ನಿಸಿದೇನೆ—ಎಂದು ಭಾವವು.)

(೮) ಕಣ್ಡದುವೇ ಕೊಣ್ಡೆಲ್ಲಾರುಮ್ ಕೂಡಿ
ಕ್ಕಾರ್ಕ್ಕಡಲ್ವಣ್ಣನೋಡೆನ್ ತಿಱತ್ತು
ಕ್ಕೊಣ್ಡು, ಅಲರ್ತೂಱ್ಱಿಱ್ಱದುಮುದಲಾ ಕ್ಕೊಣ್ಡ
ವೆನ್ಕಾದಲುರೈಕ್ಕಿಲ್ ತೋೞೀ,
ಮಣ್ತಿಣಿ ಞಾಲಮುಮೇೞ್ಕಡಲುಮ್
ನೀಳ್ವಿಶುಮ್ಬುಮ್ ಕೞಿಯ ಪ್ಪೆರಿದಾಲ್,
ತೆಣ್ತಿರೈ ಶೂೞ್ನ್ದವನ್ ವೀಱ್ಱಿರುನ್ದ
ತೆನ್ತಿರುಪ್ಪೇರೆಯಿಲ್ ಶೇರ್ವನ್ ಶೆನ್ಱೇ.

ಪ್ರ॥ ಕಣ್ಡದುವೇ ಕೊಣ್ಡು - (ಬಾಹ್ಯವಾದ) ದೃಶ್ಯವಾದ (ಶರೀರ ವೈವರ್ಣ್ಯಾದಿ) ಚಿಹ್ನಗಳನ್ನೇ ವ್ಯಾಜವಾಗಿ ಮಾಡಿಕೊಂಡು, ಎಲ್ಲಾರುಮ್-ಜನನಿಯರೂ ಊರಿನವರೂ ಮುಂತಾದವರೆಲ್ಲರೂ, ಕೂಡಿ-ಸಂಘವಾಗಿ ಸೇರಿ, ಕಾರ್ಕಡಲ್ವಣ್ಣನೋಡು - ನೀಲವಾದ ಸಮುದ್ರದಂತೆ ಬಣ್ಣವುಳ್ಳ ಸ್ವಾಮಿಯೊಡನೆ, ಎನ್ತಿಱತ್ತುಕ್ಕೊಣ್ಡು-ನನ್ನ ಶೈಥಿಲ್ಯಾದಿ ಪ್ರಕಾರಗಳನ್ನು ಅವಲಂಬಿಸಿ, ಅಲರ್

ತೂಱ್ಱಿನ್ರು ಅದು–ನಿಂದಾವಚನಗಳನ್ನು ಪ್ರಯೋಗಿಸಿದರೆಂಬುದೇ, ಮುದಲಾಕ್ಕೊಣ್ಣು – ಕಾರಣವಾಗಿ (ನನಗೆ) ಉಂಟಾದ, ಎಕ್ಕಾದಲ್ – ನನ್ನ ಆಶೆಯು, ತೋೞೀ - ಸಖಿಯೇ, ಉಱೈಕ್ಕಿಲ್–ವರ್ಣಿಸಲಾರಂಭಿಸಿದರೆ, ಮಣ್ತಿಣಿ(ಮಣ್ತಿಣಿ) –ಮಣ್ಣಿನಿಂದ ಭರಿತವಾದ, ಞಾಲಮುಮ್–ಭೂಮಿಯೂ, ಏೞುಕಡಲುಮ್–ಸಪ್ತ ಸಮುದ್ರಗಳೂ, ನೀಳ್ವಿಶುಮ್ಬುಮ್ - ವಿಶಾಲವಾದ ಆಕಾಶವೂ, ಕೞಿಯ–ತನ್ನಲ್ಲಿ ಏಕದೇಶವಾಗುವಂತೆ, ಪೆರಿದು–ಅಷ್ಟು ಅಪಾರವಾಗಿದೆ. (ಆದುದರಿಂದ) ತೆಣ್ಣಿರೈ (ತೆಳ್–ತಿರೈ)–ನಿರ್ಮಲವಾದ ಅಲೆಗಳುಳ್ಳ, ಪೊೞ್ನ್ದವೇ ವೀಱ್ಱಿರುನ್ದ–ನನ್ನ ಆಶೆಯನ್ನು ಬೆಳೆಸಿ ನನ್ನನ್ನು ಆಕ್ರಮಿಸಿದವನು ವಾಸಮಾಡುತ್ತಿರುವ, ತೇ ತಿರುಪ್ಪೇರೈಯಿಲ್–ಶ್ರೀ ಬೇರಪುರದಲ್ಲಿ, ಶೆನ್ಱು–(ನನ್ನ ಸಂತಾಪವು ಹೋಗುವಂತೆ) ಪ್ರವೇಶಿಸಿ, ಶೇರ್ವನ್–ಅಲ್ಲಿ ಸೇರುವೆನು.

( ಸ–ಗಾ–ರ ॥ )––

ಸರ್ವೇ ಮಾಮಿಹ ಬಾಹ್ಯಚಿಹ್ನವಶತಶ್ಶ್ರೀನೀಲವರ್ಣಂ ಪ್ರತಿ
ಶ್ರೀಶಾ ಮೇ ಹೃದಯಂ ದ್ರವೀಕೃತಮಿತಿ ಪ್ರಾಹುರ್ವಿನಿನ್ದಾವಚಃ ।
ಆಶಾ ಮೇ ಸಖಿ! ತಾವತೈವ ಮಹತೀ ಪೃಥ್ವೀ–ಸಮುದ್ರ ದ್ಯುಲೋ–
ಕಾತೀತಾऽಸ್ತಿ ! ವಸಾಮಿ ತಸ್ಯ ವಸತೌ ಶ್ರೀಬೇರಪುರ್ಯಾಂ ಸ್ವಯಮ್ ॥

ತಾ॥ ಎಲೈ ಸಖಿಯೇ! ಜನನಿಯರೂ ಊರಿನವರೂ ಎಲ್ಲರೂ ಸೇರಿಕೊಂಡು ನನ್ನ ಶರೀರವೈವರ್ಣ್ಯಾದಿ ಬಾಹ್ಯಚಿಹ್ನಗಳನ್ನೇ ವ್ಯಾಜಮಾಡಿಕೊಂಡು, ನೀಲವರ್ಣನಾದ ಸ್ವಾಮಿಯವಿಷಯದಲ್ಲಿ ನಾನು ಶಿಥಿಲೆಯಾಗಿದೇನೆಂದು ನನ್ನನ್ನು ನಾನಾಪ್ರಕಾರಗಳಿಂದ ನಿಂದಿಸಿದುದರಿಂದ, ನನ್ನ ಆಶೆಯು ಮಿತಿಮೀರಿಹೋಗಿ, (ಭೂಲೋಕ–ಸಪ್ತಸಮುದ್ರ–ವಿಶಾಲಾಕಾಶಾದಿಗಳೆಲ್ಲಾ ತನ್ನಲ್ಲಿ ಅಡಗಿ ಏಕದೇಶವಾಗುವಂತೆ) ಬೆಳೆದು ಅಪಾರವಾಗಿದೆ, ಆದುದರಿಂದ ನನ್ನ ಆಶೆಯನ್ನು ಬೆಳೆಸಿದ ಸ್ವಾಮಿಯು ವಾಸಮಾಡುತ್ತಿರುವ ಶ್ರೀ ಬೇರಪುರದಲ್ಲಿ ಪ್ರವೇಶಿಸಿ ಅಲ್ಲಿಯೇ ನಾನೂ ಸೇರಿ ನನ್ನ ಸಂತಾಪವನ್ನು ಪರಿಹರಿಸಿಕೊಳ್ಳುವೆನು.

(೯) ಶೇರ್ವನ್ ಶೆನ್ಱೆನ್ನುಡೈತ್ತೋೞಿಮೀರ್-
ಕಾಳನ್ನೈಯರ್ಕಾಳೆನ್ನೈತ್ ತ್ತೇಱ್ಱವೇಣ್ಡಾ,
ನೀರ್ಕಳುರೈಕ್ಕಿನ್ಱದೆನ್ನಿದಱ್ಕು ನೆಞ್ಜುಮ್
ನಿಱೈವುಮೆನಕ್ಕಿಙ್ಗಿಲ್ಲೈ,
ಕಾರ್ವಣ್ಣನ್ ಕಾರ್ಕ್ಕಡಲ್ ಞಾಲಮುಣ್ಡ
ಕಣ್ಣಪಿರಾನ್ ವನ್ದು ವೀಱ್ಱಿರುನ್ದ,
ಏರ್ವಳ ವೊಣ್ಕೞನಿ ಪ್ಪೞನ ತ್ತೆನ್ತಿರುಪ್ಪೇರೆಯಿಲ್
ಮಾನಕರೇ

ಪ್ರ॥ ಎನ್ನುಡೈ ತೋೞಿಮಾರ್ಕಾಳ್ - ನನ್ನ ಸಖಿಯರೇ!, ಅನ್ನೈಯರ್ಕಾಳ್ - ಜನನಿಯರೇ!, ಎನ್ನೈ - ನನ್ನನ್ನು, ತೇಱ್ಱವೇಣ್ಡಾ - ಶಿಕ್ಷಿಸಿ ನೀವು ಬೋಧಿಸಬೇಕಾದುದಿಲ್ಲ. ಇದಱ್ಕು - ಈ ಅವಸ್ಥೆಗೆ, ನೀರ್ಕಳ್ - ನೀವು, ಎನ್ ಉರೈಕ್ಕಿನ್ಱದು ಏನುಹೇಳುವುದಕ್ಕಾದೀತು? ನೆಞ್ಜಮ್-ಮನಸ್ಸೂ, ನಿಱೈವುಮ್-ಗುಣಪೂರ್ತಿಯೂ, ಎನಕ್ಕು-ನನಗೆ, ಇಙ್ಗು ಇಲ್ಲೈ-ಇಲ್ಲಿ ಇಲ್ಲ. ಕಾರ್ವಣ್ಣನ್-ಶ್ಯಾಮಳವರ್ಣನಾದ, ಕಾರ್ಕಡಲ್-ನೀಲವರ್ಣದ ಸಮುದ್ರದಿಂದ ಪರಿವೃತವಾದ, ಞಾಲಮ್ ಉಣ್ಡ-ಪ್ರಪಂಚವನ್ನು (ಪ್ರಳಯದಲ್ಲಿ) ಭಕ್ಷಿಸಿದ, ಪಿರಾನ್-ಸ್ವಾಮಿಯಾದ, ಕಣ್ಣನ್ ಕೃಷ್ಣನು, ವನ್ದು ವೀಱ್ಱಿರುನ್ದ-ಬಂದು ಬಿಜಯಮಾಡಿರುವ, ಏರ್ವಳ-ವೃಷಭಗಳ ಸಮೃದ್ಧಿಯುಳ್ಳ, ಒಣ್ಕೞನಿ - ರಮ್ಯವಾದ ಸಸ್ಯಕ್ಷೇತ್ರಗಳೂ, ಪೞನಮ್ - ಜಲಪ್ರದೇಶಗಳೂ ಉಳ್ಳ, ತೆನ್ ತಿರಪ್ಪೇರೈಯಿಲ್ - ಶ್ರೀ ಬೇರ ಪುರದಲ್ಲಿರುವ, ಮಾನಕರ್-ಮಹಾನಗರವನ್ನು, ಶೆನ್ಱು-ಪ್ರವೇಶಿಸಿ, ಶೇರ್ವನ್-ನಾನು ಅಲ್ಲಿಯೇ ಸೇರುವೆನು.

( ಸ-ಗಾ-ರ ॥ )—

ಸಖ್ಯೋ! ಮಾತರ ಏವಮದ್ಯ ನ ತು ಮಾಮಾಶ್ವಾಸಯೇತ ಸ್ವಯಂ !
ಕಿಂ ವಕ್ತವ್ಯಮಿಹಾಸ್ತಿ ವೋ? ಮಮ ಮನಃ ಪೂರ್ತಿಶ್ಚ ನಾಸ್ತೀಹ ಹಿ |
ಕೃಷ್ಣಶ್ಶ್ಯಾಮಳವರ್ಣ ಏಷ ಭಗವಾನಾಸ್ತೇ ಸ್ವಯಂ ಶ್ರೀಧರ-
ಶ್ರೀಬೇರಾಖ್ಯಪುರೇ ಹಿ ಸಸ್ಯಭರಿತೇ ತತ್ರೈವ ಯಾಮಿ ಕ್ಷಣಾತ್ ॥

ತಾ॥ ನನ್ನ ಸಖಿಯರೇ! ಜನನಿಯರೇ! ನನ್ನನ್ನು ನೀವು ಶಿಕ್ಷಿಸಿ ಬೋಧಿಸಬೇಕಾದುದಿಲ್ಲ. ನನ್ನ ಈ ಅವಸ್ಥೆಗೆ ತಕ್ಕಂತೆ ನೀವು ಏನು ಹೇಳಲಾದೀತು!

ನನ್ನ ಮನಸ್ಸೂ ಗುಣಪೂರ್ತಿಯೂ ಈಗ ಇಲ್ಲಿ ಇಲ್ಲ. ಶ್ಯಾಮಳವರ್ಣನಾದ ಜಗದ್ರಕ್ಷಕನಾದ ಶ್ರೀಕೃಷ್ಣನು ಬಂದು ಬಿಜಯಮಾಡಿರುವ ಸಸ್ಯಕ್ಷೇತ್ರಾದಿ ಜಲಸಮೃದ್ಧಿಯುಳ್ಳ ಶ್ರೀ ಬೇರಪುರಕ್ಕೆ ಸೇರಿದ ಮಹಾನಗರದಲ್ಲಿ ಪ್ರವೇಶಿಸಿ ನಾನು ಅಲ್ಲಿಯೇ ವಾಸಮಾಡುವೆನು—ಎಂದು ಭಾವವು.

(೧೦) ನಕರಮುಮ್ ನಾಡುಮ್ ಪಿಱವುಮ್ ತೇರ್ವೇನ್
ನಾಣೆನಕ್ಕಿಲ್ಲೈ ಯೆನ್ ತೋೞಿಮೀರ್ಕಾಳ್,
ಶಿಕರಮಣಿನೆಡುಮಾಡ ನೀಡು ತೆನ್ತಿರುಪ್ಪೇರೈಯಿಲ್
ವೀಱ್ಱಿರುನ್ದ,
ಮಕರನೆಡುಮ್ ಕುೞೈಕ್ಕಾದನ್ ಮಾಯನ್
ನೂಱ್ಱುವರೈಯನ್ಱು ಮಙ್ಗ ನೂಱ್ಱ
ನಿಕರಿಲ್ ಮುಕಿಲ್ವಣ್ಣನ್ ನೇಮಿಯಾನೆನ್ನೆಞ್ಜಮ್
ಕವರ್ನ್ದೆನ್ನೈ ಯೂೞಿಯಾನೇ.

ಪ್ರ॥ ಎನ್ ತೋೞಿಮೀರ್ಕಾಳ್ – ನನ್ನ ಸಖಿಯರೇ!, ಶಿಕರಮಣಿನೆಡುಮಾಡಮ್ – ಶಿಖರಗಳುಳ್ಳ ರತ್ನಮಯವಾದ ಉನ್ನತವಾದ ಉಪ್ಪರಿಗೆ ಮನೆಗಳು ನೀಡು – ಶಾಶ್ವತವಾಗಿ ಬಾಳುವ, ತೆನ್ತಿರುಪ್ಪೇರೈಯಿಲ್ – ಶ್ರೀಬೇರಪುರದಲ್ಲಿ ವೀಱ್ಱಿರುನ್ದ–ಬಿಜಯಮಾಡಿರುವ, ಮಕರ–ಮಕರರೂಪವುಳ್ಳ, ನೆಡುಮ್–ವಿಶಾಲವಾದ, ಕುೞೈ–ಆಭರಣದಿಂದ ಕೂಡಿದ, ಕಾದನ್–ಕರ್ಣಪಾಶವುಳ್ಳ ಸ್ವಾಮಿಯಾದ (ಮಕರಾಯತಕರ್ಣಪಾಶ – ನಾಮಧೇಯವುಳ್ಳ ಸ್ವಾಮಿಯಾದ), ಮಾಯನ್–ಮಾಯಾಚೇಷ್ಟಿತನಾದ, ನೂಱ್ಱುವರೈ ಅನ್ಱು ಮಙ್ಗ–ನೂರುಮಂದಿ ಕೌರವರನ್ನು ಆಗ ಭಾರತಯುದ್ಧದಲ್ಲಿ ನಾಶಪಡಿಸುವಂತೆ, ನೂಱ್ಱ–ಸಂಕಲ್ಪಿಸಿದ, ನಿಕರಿಲ್–ತನಗೆ ಸಮಾನರಿಲ್ಲದ, ಮುಕಿಲ್ವಣ್ಣನ್–ಮೇಘವರ್ಣನಾದ, ನೇಮಿಯಾನ್–ಚಕ್ರಧರನಾದ ಸ್ವಾಮಿಯು, ಎನ್ ನೆಞ್ಜಮ್–ನನ್ನ ಮನಸ್ಸನ್ನು, ಕವರ್ನ್ದು–ಅಪಹರಿಸಿ, ಎನ್ನೈ ಊೞಿಯಾನ್ – ಎಷ್ಟು ಕಾಲದಿಂದ ಸಙ್ಕಲ್ಪಮಾಡಿದವನೋ!, ನಕರಮುಮ್ ನಾಡುಮ್–ಅವನಿದ್ದ ನಗರವೂ ನಾಡೂ, ಪಿಱವುಮ್–ಮತ್ತು ಇತರ ಊರುಗಳೂ ಇವುಗಳಲ್ಲೆಲ್ಲಾ, ತೇರ್ವೇನ್–ನಾನೇ ಹೋಗಿ ಹುಡುಕುವೆನು. ನಾಣ್ ಎನಕ್ಕು ಇಲ್ಲೈ–ಲಜ್ಜೆಯು ನನಗೆ ಇಲ್ಲ. (ನಾನು ಲಜ್ಜೆಯನ್ನು ಬಿಟ್ಟು ಇದೇನೆಂದು ಭಾವವು.)

(ಶ-ಗಾ-ರ || )—

ಸಖ್ಯೋ ಮೇ ಶೃಣುತ ಪ್ರಭಾಸ್ವರಮಹಾಸೌಧಾಞ್ಚಿತೇಽಸ್ಮಿನ್ ಪುರೇ
ಶ್ರೀಬೇರೇ ಮಕರಾಯತಶ್ರುತಿಪುಟೋ ಮಾಯಾ ಹರಿಶ್ಶ್ರೀಧರಃ |
ಹತ್ವಾ ತಾನ್ ಶತಕೌರವಾನಪಿ ಚಿರಾಚ್ಚಿತ್ತಂ ಚ ನೀಲಾಮ್ಬುದ-
ಚ್ಛಶ್ರೀ ಮೇ ಹೃತವಾನ್ ವಿಚಿತ್ಯ ತಮನು ವ್ರಜ್ಯಾಂ ನ ಲಜ್ಜಾಽಸ್ತಿ ಮೇ ||

ತಾ|| ಎಲೈ ಸಖಿಯರೇ! ಉನ್ನತರತ್ನಮಯಸೌಧಭರಿತವಾದ ಶ್ರೀಬೇರಪುರದಲ್ಲಿ ಬಿಜಯಮಾಡಿರುವ ಮಕರಾಯತಕರ್ಣಪಾಶ - ಸ್ವಾಮಿಯೆಂಬ ನೀಲಮೇಘವರ್ಣನಾದ ಚಕ್ರಪಾಣಿಯಾದ ಕೌರವಸೈನ್ಯನಾಶಕನಾದ ಶ್ರೀಕೃಷ್ಣನು ನನ್ನ ಮನಸ್ಸನ್ನು ಅಪಹರಿಸಲು ಎಷ್ಟುಕಾಲದಿಂದ ಸಂಕಲ್ಪಮಾಡಿದನೋ! ಈಗ ಅವನು ವಾಸಮಾಡುವ ನಗರ-ದೇಶ-ಮತ್ತು ಊರುಗಳಲ್ಲೆಲ್ಲಾ ಹೋಗಿ ನಾನೇ ಹುಡುಕುವೆನು. ನನಗೆ ಸ್ತ್ರೀತ್ವಪ್ರಯುಕ್ತವಾದ ಲಜ್ಜೆಯು ಇಲ್ಲ.

(೧೧) ಊೞಿತೋಱೂೞಿ ಯುರುವುಮ್ ಪೇರುಮ್
ಶೆಯ್‌ಕೈಯುಮ್ ವೇಱವನ್ ವೈಯಮ್ ಕಾಕ್ಕುಮ್,
ಆೞಿನೀರ್‌ವಣ್ಣನೈ ಯಚ್ಚುತನೈ ಯಣಿಕುರುಕೂರ್
ಚ್ಚಡಕೋಪನ್ ಶೊನ್ನ,
ಕೇೞಿಲನ್ದಾದಿಯೋರಾಯಿರತ್ತುಳ್ಳಿವೈ
ತಿರುಪ್ಪೇರೈಯಿಲ್ ಮೇಯ ಪತ್ತುಮ್,
ಆೞಿಯಙ್ಕೈಯನ್ನೆ ಯೇತ್ತವಲ್ಲಾರವರಡಿಮೈ,
ತ್ತಿಱತ್ತಾಱ್ಱೆಯಾರೇ.

ಪ್ರ|| ಊೞಿತೋಱೂೞಿ ಊೞಿತೋಱು – ಪ್ರತಿಕಲ್ಪದಲ್ಲೂ, ಉರುವುಮ್ – ರೂಪವೂ (ಶರೀರವೂ), ಪೇರುಮ್ – ನಾಮಧೇಯವೂ, ಶೆಯ್‌ಕೈಯುಮ್ – ಕೃತ್ಯವೂ, ವೇಱವನ್ – ( ಅವತಾರಗಳಲ್ಲಿ ) ಬೇರೆಬೇರೆಯಾಗಿ ಉಳ್ಳವನಾದ, ವೈಯಮ್ ಕಾಕ್ಕುಮ್–ಲೋಕವನ್ನು ರಕ್ಷಿಸುವ, ಆೞಿನೀರ್ ವಣ್ಣನೈ–ಸಮುದ್ರದ ನೀರಿನಂತೆ ವರ್ಣವುಳ್ಳ, ಅಚ್ಚುತನೈ – ಆಶ್ರಿತರನ್ನು ಕೈಬಿಡದೆ ಇರುವ ಸ್ವಾಮಿಯನ್ನು, ಅಣಿಕುರುಕೂರ್ – ರಮ್ಯವಾದ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್–ಶಠಾರಿಮುನಿಯು, ಶೊನ್ನ–ಸ್ತೋತ್ರಮಾಡಲು ರಚಿಸಿದ, ಕೇೞಿಲ್–ಅಸದೃಶವಾದ, ಅನ್ದಾದಿ–ಅನ್ತಾದಿರೂಪವಾದ, ಓರ್ ಆಯಿರತ್ತುಳ್–ಅದ್ವಿತೀಯ

ವಾದ ಸಹಸ್ರಪದ್ಯಮಾಲಿಯೊಳು, ತಿರುಪ್ಪೇರ್ಯೆಯಿಲ್ ಮೇಯ-ಶ್ರೀಬೇರಪುರವಿಷಯದಲ್ಲಿ ಅನುರೂಪವಾದ, ಇವೈಪತ್ತುಮ್ – ಈ ಹತ್ತುಪದ್ಯಗಳನ್ನು ಗಾನಮಾಡಿ, ಆಳಿಯುಶ್ಶೆಯ್ಯಸ್ಕೈ-ಚಕ್ರಪಾಣಿಯಾದ ಸ್ವಾಮಿಯನ್ನು, ಏತ್ತವಲ್ಲಾರ್–ಸ್ತೋತ್ರಮಾಡಬಲ್ಲವರು, ಅವರ್ ಅಡಿವೈತ್ತಿಅತ್ತು – ಅವನ ನಿತ್ಯಕೈಙ್ಕರ್ಯಮಾಡುವುದರಲ್ಲಿ, ಆಳಿಯಾರೇ–ಸುದರ್ಶನನಿಗೆ (ಚಕ್ರಾಯುಧಕ್ಕೆ) ಸಮಾನರಾದವರೇ ಆಗುವರು.

( ಸ–ಗಾ–ರ || )—

ನಾನಾಕಲ್ಪಯುಗಾದಿಷು ಸ್ವಯಮಸೌ । ನಾಮಾನಿ ರೂಪಾಣಿ ಸ –
ದ್ವೃತ್ತಾದೀನಿ ಪೃಥಗ್ಬಿಭರ್ತಿ ಯ ಇಮಂ ಸ್ತೋತುಂ ಜಗತ್ಪಾಲಕಮ್ ।
ನೀಲಾಮ್ಭೋಧಿನಿಭಂ ಶಠಾರಿರವದತ್ಸಾಹಸ್ರಮನ್ತ್ರಾದಿಕಂ
ಶ್ರೀಬೇರಾಖ್ಯಪುರಂ ಪ್ರತೀಹ ದಶಕಾಧ್ಯೇತಾಸ್ತು ಚಕ್ರಾಯುಧಃ ||

ತಾ|| ಪ್ರತಿಕಲ್ಪದಲ್ಲೂ ರೂಪ—ನಾಮ—ಕೃತ್ಯಾದಿ ಭೇದಗಳುಳ್ಳವನಾಗಿ ಲೋಕರಕ್ಷಕನಾದ ( ಸಮುದ್ರವರ್ಣನಾದ ) ಅಚ್ಯುತನನ್ನು ಸ್ತೋತ್ರಮಾಡುವುದಕ್ಕಾಗಿ ಶ್ರೀ ಕುರುಕಾಪುರಿಯ ಶಠಾರಿಮುನಿಯಿಂದ ರಚಿತವಾದ ಅನ್ತಾದಿರೂಪವಾದ ಸಹಸ್ರಪದ್ಯಮಾಲಿಯೊಳು, ಶ್ರೀಬೇರಪುರವಿಷಯದಲ್ಲಿ ಅನುರೂಪವಾದ ಈ ದಶಕವನ್ನು ಗಾನಮಾಡಿ ಚಕ್ರಪಾಣಿಯಾದ ಸ್ವಾಮಿಯನ್ನು ಸ್ತೋತ್ರಮಾಡಬಲ್ಲವರು ಅವನ ನಿತ್ಯಕೈಙ್ಕರ್ಯಮಾಡುವುದರಲ್ಲಿ ಸುದರ್ಶನನಿಗೆ ಸಮಾನರಾಗುವರು.

( ದ್ರ–ಉ–ಸಂ || )—

ಶ್ರೀರಙ್ಗಭರ್ತುರಶರಣ್ಯಶರಣ್ಯಭಾವ –
ಪ್ರಸ್ತಾವಲಬ್ಧಧೃತಿರಸ್ಯ ಗತೌ ಸ ಭೂಯಃ ।
ಸ್ವಸ್ಮಿನ್ ಹಿತಪ್ರಿಯಪರೇತರನಿರ್ವಿಶೇಷ –
ಮಾಶೇದವಾರ್ಯಬಹುಳಾಭಿರುಚಿಸ್ತೃತೀಯೇ ||

( ದ್ರ–ಉ–ತಾ–ರ || )—

ಪದ್ಮಾಕ್ಷತ್ವೇನ ಹೃತ್ಸ್ಥಃ ಪರಮುಖನಿಲಯಸ್ಸ್ವೋಪಕಾರೀ ವಿಗರ್ಜ–
ದ್ಭುಜ್ಯೋಽನಿಷ್ಟಪ್ರಹರ್ತಾ ದರವಿಲಸನಸ್ವದ್ರಕ್ಷಕೋಽಮ್ಭೋಧಿದೃಶ್ಯಃ ।
ಆಪತ್ಸಂರಕ್ಷಕಶ್ರೀಮಕರವರಲಸತ್ಕುಣ್ಡಲಸ್ವಾಙ್ಗಕಾನ್ತಿಃ
ಸ್ವೇಷು ಸ್ವಂ ಗೋಪ್ತೃಭಾವಂ ಪ್ರಕಟಯತಿ ಹರಿಶ್ಚೇತ್ಯಶಂಸಚ್ಛಠಾರಿಃ ||

( ಈ ತೃತೀಯದಶಕದ ಸಾರಾಂಶ— )

ಈ ಮೂರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾರೂಪವನ್ನು ಅಂಗೀಕರಿಸಿ—ತೆನ್‌ತಿರುಪ್ಪೇರೈಯೆಂಬ ದಿವ್ಯದೇಶದಲ್ಲಿರುವ ಶ್ರೀ ಮಕರಾಯತಕರ್ಣಪಾಶ- ಸ್ವಾಮಿಯಲ್ಲಿ ವ್ಯಾಮೋಹದಿಂದ ತಾನು ಆ ಊರಿಗೆ ಹೋಗಿ ಸೇರಬೇಕೆಂದು ನಿಶ್ಚಯಿಸಿ, ತನ್ನ ಸಖೀಜನ – ಮಾತೃವರ್ಗಾದಿಗಳನ್ನು ಕುರಿತು- ಆ ಸ್ವಾಮಿಯ ಪ್ರಭಾವವನ್ನೂ, ಆ ಊರಿನ ವೇದಘೋಷಾದಿ ಮಹೋತ್ಸವ ವೈಭವವನ್ನೂ, ಆ ಸ್ವಾಮಿಯ ಬಿಮ್ಬಾಧರಪುಟದಲ್ಲಿ ತನ್ನ ಮನಸ್ಸು ಸಕ್ತವಾಗಿರುವುದನ್ನೂ, ತಾನು ಲಜ್ಜಾ ಶೀಲಾದಿಗಳನ್ನು ಬಿಟ್ಟು ಅವನನ್ನೇ ಹೊಂದಬೇಕೆಂಬ ಅಪಾರವಾದ ಆಶೆಯುಳ್ಳವಳಾಗಿರುವುದನ್ನೂ, ಆ ಊರಿಗೆ ತನ್ನನ್ನು ಕರೆದುಕೊಂಡು ಹೋಗಿ ಈ ಅವಸ್ಥೆಗೆ ತಕ್ಕ ಪರಿಹಾರವನ್ನು ಹುಡುಕಬೇಕೆಂಬುದನ್ನೂ – ತಮ್ಮ ನಾಯಿಕಾಭಾವದಿಂದ ವಿಶದವಾಗಿ ವರ್ಣಿಸಿ ಇರುತ್ತಾರೆ.

—:❖:—

## ಶ್ರೀಃ

## ಸಪ್ತಮಶತಕದಲ್ಲಿ—ಚತುರ್ಥದಶಕ.

(ಆೞಿಯೆೞ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಅವತಾರ ವಿಜಯ ರೂಪವಾದ ದಿವ್ಯಚರಿತ್ರಗಳನ್ನು ಅನುಭವಿಸಿ ವರ್ಣಿಸಿ ಇರುತ್ತಾರೆ.)

(೧) ಆೞಿಯೆೞ ಚ್ಚಙ್ಗುಮ್ ವಿಲ್ಲುಮೆೞ ತ್ತಿಶೈ<br>
ವಾೞಿಯೆೞ ತ್ತಣ್ಡುಮ್ ವಾಳುಮೆೞ, ಅಣ್ಡಮ್<br>
ಮೋೞೈಯೆೞ ಮುಡಿಪಾದಮೆೞ, ಅಪ್ಪನ್<br>
ಊೞಿಯೆೞ ವುಲಕಙ್ಕೊಣ್ಡವಾಱೇ.

ಪ್ರ॥ ಆೞಿ – ಚಕ್ರವು, ಎೞ – ಮೇಲಕ್ಕೆ ಎದ್ದು ತೋರಲು, ಶಙ್ಗುಮ್ ವಿಲ್ಲುಮ್ ಎೞ–(ಅನನ್ತರ) ಶಂಖವೂ ಧನುಸ್ಸೂ ಎದ್ದು ತೋರಲು, ತಣ್ಡುಮ್–

ಗದೆಯೂ, ವಾಳುಮ್-ಖಡ್ಗವೂ, ಎೞ-ಮೇಲಕ್ಕೆ ಏಳಲು, ತಿಶೈ-ದಿಕ್ಕುಗಳಲ್ಲೆಲ್ಲಾ, ವಾೞಿ - (ಭಕ್ತರ) ಸ್ತೋತ್ರಘೋಷವು, ಎೞ - ಮೇಲಕ್ಕೆ ಏಳಲು, ಅಣ್ಡಮ್- ಅಣ್ಡಕಪಾಲವು ಭಿನ್ನವಾಗಿ, ಮೋೞೈ, ಎೞ - (ಆವರಣಜಲದಲ್ಲಿ) ಗುಳ್ಳೆಗಳು ಏಳಲು, ಮುಡಿ - ಕಿರೀಟವೂ, ಪಾದಮ್ ಮೇಲಕ್ಕೆ ಎತ್ತಿದ ಪಾದವೂ, ಎೞ- ಮೇಲೆ ಚೆನ್ನಾಗಿ ಉನ್ನತವಾಗಿ ಪ್ರಕಾಶಿಸಲು, ಊೞಿ ಎೞ - (ಮಹಾಬಲಿಯ ಗರ್ವವು ಭಗ್ನವಾಗಿ) ಒಳ್ಳೆಯಕಾಲವು ಪ್ರಾಪ್ತವಾದಾಗ, ಅಪ್ಪನ್-ಸರ್ವೇಶ್ವರನು, ಉಲಕಮ್-ಲೋಕವನ್ನು, ಕೊಣ್ಡ-(ತ್ರಿವಿಕ್ರಮಾವತಾರದಲ್ಲಿ) ಅಳೆದುಕೊಂಡ, ಆಱು-ಪ್ರಕಾರವು, ಏ-ಏನು ವಿಚಿತ್ರವಾದುದೋ!

( ಸ-ಗಾ-ರ ॥ )—

ಚಕ್ರಂ ಚ ಶಙ್ಖ ಇಷು ಶಾರ್ಙ್ಗಮಪಿ ಕ್ರಮೇಣ
ದಿಗ್ವನ್ದಿವಾಕ್ತತಿಗದಾಸಿಗಣಾಃ ಕಿಲೋಚ್ಚಾಃ ।
ಅಣ್ಡಾಜ್ಜಲಾನಿ ಮಕುಟಾಙ್ಘ್ರಿತಲೇ ಕಿಲೋಚ್ಚೇ
ಕಾಲೋದ್ಗಮೇ ನನು ಹರೇ ರ್ಜಗದಾಕ್ರಮೋಽಯಮ್ ॥

ತಾ॥ (ತ್ರಿವಿಕ್ರಮಾವತಾರದಲ್ಲಿ ಲೋಕವನ್ನು ಅಳೆದುಕೊಂಡ ಪ್ರಕಾರವನ್ನು ವರ್ಣಿಸುತ್ತಾರೆ.) ಮೊದಲು ಚಕ್ರವೂ ಅನನ್ತರ ಶಂಖವೂ ಧನಸ್ಸೂ ಮೇಲಕ್ಕೆ ಎದ್ದು ಪ್ರಕಾಶಿಸುವಂತೆಯೂ, ದಿಕ್ಕುಗಳಲ್ಲೆಲ್ಲಾ ಸ್ತೋತ್ರಘೋಷವು ಮೇಲಕ್ಕೆ ಏಳುವಂತೆಯೂ, ಅಣ್ಡಕಪಾಲವು ಭಿನ್ನವಾಗಿ ಆವರಣಜಲದಲ್ಲಿ ಗುಳ್ಳೆಗಳು ಮೇಲಕ್ಕೆ ಏಳುವಂತೆಯೂ, ಕಿರೀಟವೂ ಮೇಲಕ್ಕೆ ಎತ್ತಿದ ಪಾದವೂ ಉನ್ನತ ಪ್ರದೇಶದಲ್ಲಿ ಪ್ರಕಾಶಿಸುವಂತೆಯೂ, (ಬಲಿ ಗರ್ವಭಂಗವಾಗುವಂತೆ) ಒಳ್ಳೆಯ ಕಾಲವು ಬಂದಾಗ ಸರ್ವೇಶ್ವರನು ಲೋಕವನ್ನು ಅಳೆದುಕೊಂಡ ಪ್ರಕಾರವು ಏನು ವಿಚಿತ್ರವಾದುದೋ!

(೨) ಆಱು ಮಲೈಕ್ಕೆದಿರ್ನ್ದೋಡುಮೊಲಿ, ಅರ
ವೂಱು ಶುಲಾಯ್ ಮಲೈತೇಯ್ಕ್ಕುಮೊಲಿ, ಕಡಲ್
ಮಾಱು ಶುೞನ್ಱಳೈಕ್ಕಿನ್ಱವೊಲಿ, ಅಪ್ಪನ್
ಶಾಱುಪಡ ವಮುದಙ್ಕೊಣ್ಡ ನಾನ್ಱೇ.

ಪ್ರ॥ ಅಪ್ಪನ್ - ಸರ್ವೇಶ್ವರನು, ಶಾಱುಪಡ-ಮಹೋತ್ಸವವು ಉಂಟಾಗುವಂತೆ, ಅಮುದಮ್ ಕೊಣ್ಡ - (ಸಮುದ್ರಮಥನಮಾಡಿ) ಅಮೃತವನ್ನು ತಂದು

ಕೊಟ್ಟ, ಞಾನ್ರು-ಕಾಲದಲ್ಲಿ, (ಆ ಮಥನವೇಗದಿಂದ) ಆಱು-ನದಿಗಳು, ಮಲೈಕ್ಕ-(ತಮ್ಮ ಉತ್ಪತ್ತಿಸ್ಥಾನವಾದ) ಪರ್ವತಗಳನ್ನು ಕುರಿತು, ಎದಿರ್ನ್ದು ಓಡುಮ್-ಅಭಿಮುಖವಾಗಿ ಓಡುತ್ತಿರುವ, ಒಲಿ-ಘೋಷವೂ, ಅರವು-ವಾಸುಕಿಯ, ಊಱು-ಶರೀರವನ್ನು, ಕುಲಾಯ್-ಸುತ್ತಿ, ಮಲೈ-ಮನ್ದರಪರ್ವತವನ್ನು, ತೇಯ್ಕ್ಕುಮ್-ಎಳೆದು ಕಡೆಯುವ, ಒಲಿ-ಘೋಷವೂ, (ಮಥನದಿಂದ) ಕಡಲ್-ಸಮುದ್ರವು, ಮಾಱು-ಬದಲಾಯಿಸಿ ಅಲ್ಲೋಲಕಲ್ಲೋಲವಾಗಿ, ಶುೞನ್ರು ಅೞೈಕ್ಕಿನ್ನ-ಸುಳಿಗಳಿಂದಲೂ ಅಲೆಗಳ ಪರಸ್ಪರಾಘಾತಗಳಿಂದಲೂ ಉಂಟಾಗಿರುವ, ಒಲಿ-ಘೋಷವೂ—(ಉಂಟಾದುವು).

( ಸ-ಗಾ-ರ ॥ )—

ಸರ್ವೇಶ್ವರೇಣ ವಿಬುಧೋತ್ಸವಮನ್ಥಕಾಲೇ
ದಿವ್ಯಾಮೃತಾರ್ಜನವಿಧೌ ಸರಿತೋ ಗಿರೀನ್ ಸ್ವಾನ್ |
ಪ್ರತ್ಯುದ್ಗತಾ ಇತಿ ಚ ವಾಸುಕಿಮನ್ದರೋತ್ಥಾ
ಮನ್ಥೇ ಚ ತಟ್ಟ್ವರಣಿರ್ಮಹತೀ ಮಹಾಬ್ಧೌ ॥

ತಾ॥ (ಸಮುದ್ರಮಥನದ ವೈಭವವನ್ನು ವರ್ಣಿಸುತ್ತಾರೆ.) ದೇವತೆಗಳಿಗೆ ಮಹೋತ್ಸವವುಂಟಾಗುವಂತೆ ಸಮುದ್ರಮಥನವಂಮಾಡಿ ಸರ್ವೇಶ್ವರನು ಅಮೃತವನ್ನು ತಂದುಕೊಟ್ಟಾಗ ನದಿಗಳು ಆ ಮಥನ ವೇಗದಿಂದ ತಮ್ಮ ಉತ್ಪತ್ತಿಸ್ಥಾನವಾದ ಪರ್ವತಗಳನ್ನು ಕುರಿತು ಹಿಂದಕ್ಕೆ ಓಡುವ ಘೋಷವೂ, ವಾಸುಕಿಯ ಶರೀರವನ್ನು ಸುತ್ತಿ ಮನ್ದರಪರ್ವತವನ್ನು ಸಮುದ್ರದಲ್ಲಿಟ್ಟು ಕಡೆಯುವ ಘೋಷವೂ, ಸಮುದ್ರದನೀರು ಅಲ್ಲೋಲಕಲ್ಲೋಲವಾಗಿ ಸುಳಿಗಳಿಂದಲೂ ಅಲೆಗಳ ಪರಸ್ಪರಾಘಾತಗಳಿಂದಲೂ ಉಂಟಾಗುವ ಘೋಷವೂ—ಇವುಗಳೆಲ್ಲಾ ಏಕಕಾಲದಲ್ಲಿ ಉದ್ಭವಿಸಿದವು.

(೩) ನಾೞಿಲವೇೞ್ ಮಣ್ಣ್ಣಾಮ್ ತಾನತ್ತುವೇ, ಪಿನ್ನುಮ್
ನಾೞಿಲವೇೞ್ ಮಲೈತಾನತ್ತುವೇ, ಪಿನ್ನುಮ್
ನಾೞಿಲವೇೞ್ ಕಡಲ್ತಾನತ್ತುವೇ, ಅಪ್ಪನ್
ಊೞಿ ಯಿಡನ್ದಿಯಿಳ್ಶಿಲ್ ಕೊಣ್ಡ ನಾಳೇ,

ಪ್ರ|| ಅಪ್ಪ್-ಮಹೋಪಕಾರಕನಾದ ಸ್ವಾಮಿಯು, ಊೞಿ-(ಪ್ರಳಯಕಾಲದಲ್ಲಿ) ಅಣ್ಡಕಪಾಲದಲ್ಲಿ ಸಿಕ್ಕಿ ಇದ್ದ ಭೂಮಿಯನ್ನು ಕಿತ್ತು, ಇಡನ್ದು - ಭೇದಿಸಿ, ಎಯಿಱ್ಱಿಲ್ ಕೊಣ್ಡ-ಕೊಂಬಿನಮೇಲೆ ಎತ್ತಿ ಇಟ್ಟುಕೊಂಡ, ನಾಳ್-ಕಾಲದಲ್ಲಿ, ಏೞ್-ಸಪ್ತದ್ವೀಪರೂಪವಾದ, ಮಣ್ಣುಮ್-ಭೂಭಾಗಗಳೂ, ನಾನಿಲ-ಜಾರಿಬೀಳದಂತೆ, ತಾನತ್ತ-ತಮ್ಮ ತಮ್ಮ ಸ್ಥಾನಗಳಲ್ಲಿ ಇದ್ದುವು, ಪಿನ್ನುಮ್ - ಮತ್ತೂ, ಏೞ್ಮಲೈ-ಸಪ್ತಪರ್ವತಗಳೂ, ನಾನಿಲ - ಚಲಿಸದಂತೆ, ತಾನತ್ತ - ಸ್ಥಿರವಾಗಿ ತಮ್ಮ ತಮ್ಮ ಸ್ಥಾನಗಳಲ್ಲಿ ಇದ್ದುವು, ಪಿನ್ನುಮ್ - ಮತ್ತೂ, ಏೞ್ಕಡಲ್-ಸಪ್ತಸಮುದ್ರಗಳೂ, ನಾನಿಲ - ಭಿನ್ನಮಾರ್ಗಗಳಾಗದಂತೆ, ತಾನತ್ತ - ತಮ್ಮ ತಮ್ಮ ಸ್ಥಾನಗಳಲ್ಲೇ ಇದ್ದುವು.

( ಸ-ಗಾ-ರ || )—

ದೇವೇ ತದಾಽಣ್ಡತಲತಃ ಪೃಥಿವೀನ್ತು ಶೃಙ್ಗ -
ದುದ್ಧೃತ್ಯ ಬಿಭ್ರತಿ ನಿಜಸ್ಥಿತಿಮೇವ ಯಾತಾ |
ಸಪ್ತಾನ್ತರೀಪಸರಣಿರ್ಗಿರಯೋಽಪಿ ಸಪ್ತ
ಸ್ವಸ್ಥಾನಗಾ ಜಲಧಯೋಽಪಿ ಚ ಸಪ್ತ ಸುಸ್ಥಾಃ ||

ತಾ|| (ವರಾಹಾವತಾರದ ವೈಭವವನ್ನು ವರ್ಣಿಸುತ್ತಾರೆ.) ಮಹೋಪಕಾರಕನಾದ ಸ್ವಾಮಿಯು ಪ್ರಳಯಕಾಲದಲ್ಲಿ ಅಣ್ಡಕಪಾಲದಲ್ಲಿ ಸಿಕ್ಕಿ ಹೊರಟುಹೋಗಿದ್ದ ಭೂಮಿಯನ್ನು ಕಿತ್ತು ಮೇಲಕ್ಕೆ ಎತ್ತಿ ತನ್ನ ಕೊಂಬಿನಮೇಲೆ ಇಟ್ಟುಕೊಂಡಾಗ, ಸಪ್ತದ್ವೀಪಗಳೂ, ಸಪ್ತಪರ್ವತಗಳೂ, ಸಪ್ತಸಮುದ್ರಗಳೂ, ತಮ್ಮತಮ್ಮ ಸ್ಥಾನಗಳಲ್ಲೇ (ಸ್ವಲ್ಪವೂ ಸ್ಥಾನಭೇದವಿಲ್ಲದಂತೆ) ಕ್ರಮವಾಗಿ ಇದ್ದುವು

(೪) ನಾಳುಮೆೞು ನಿಲನೀರುಮೆೞು, ವಿಣ್ಣುಮ್
ಕೋಳುಮೆೞು ಎರಿಕಾಲುಮೆೞು, ಮಲೈ
ತಾಳುಮೆೞು ಚಣ್ಡಮಾರುತನುಮೆೞು, ಅಪ್ಪನ್
ಊೞಿಯೆೞು ವುಲಕಮುಣ್ಡ ವೂಣೇ.

ಪ್ರ|| ನಾಳುಮ್ - ಕಾಲಭಾಗಗಳಾದ ದಿನಾದಿಗಳು, ಎೞು - ನಷ್ಟವಾಗುವಂತೆಯೂ, ನಿಲನೀರುಮ್ ಎೞು - ಭೂಮಿಯೂ ಜಲವೂ ನಾಶಹೊಂದುವಂತೆಯೂ, ವಿಣ್ಣುಮ್-ಆಕಾಶವೂ, ಕೋಳುಮ್ - ಗ್ರಹಗಳೂ, ಎೞು- ನಷ್ಟ

ವಾಗುವಂತೆಯೂ, ಎರಿ-ಅಗ್ನಿಯೂ, ಕಾಲುಮ್-ವಾಯುವೂ, ಎಲ್ಲಾ-ನಷ್ಟವಾಗು ವಂತೆಯೂ, ಮಲೈತಾಳುಮ್ - ಪರ್ವತಗಳ ಮೂಲಪ್ರದೇಶಗಳೂ, ಎಲ್ಲಾ-ನಷ್ಟ ವಾಗುವಂತೆಯೂ ಶುಡರ್ ತಾನುಮ್ - ನಕ್ಷತ್ರಾದಿ ಜ್ಯೋತಿರ್ಮಣ್ಡಲಗಳೂ, ಎಲ್ಲಾ-ನಷ್ಟವಾಗುವಂತೆಯೂ, ಅಪ್ಪನ್-ಸರ್ವೇಶ್ವರನು, ಊಳಿ - ಮಹಾಶಬ್ದವು, ಎಲ್ಲಾ-ಉದ್ಭವಿಸುವಂತೆ, ಉಲಕಮುಣ್ಡ-(ಪ್ರಳಯದಲ್ಲಿ) ಲೋಕವನ್ನು ಭಕ್ಷಿಸಿದ, ಊಣ್-ಭಕ್ಷಣಪ್ರಕಾರವು, ಏ ಏನು ವಿಚಿತ್ರವಾದುದೋ!

( ಸ-ಗಾ-ರ || )—

ದೇವಸ್ಯ ಭಕ್ಷಣವಿಧಿರ್ಜಗತಾಂ ತು ಕೀದೃಕ್
ಕಾಲಶ್ಚ ಭೂಮಿರಪಿ ವಾರಿನಭೋಗ್ರಹಾಶ್ಚ |
ಅಗ್ನಿಶ್ಚ ವಾಯುರಪಿ ಘೋರರವೈಃ ಪ್ರಣಷ್ಟಾ
ನಿರ್ಮೂಲಿತಾಶ್ಚ ಗಿರಯೋ ಮಹಸಾಂ ಪ್ರಣಾಶೈಃ ||

ತಾ|| (ಪ್ರಳಯಕಾಲದ ಕ್ರಮವನ್ನು ವರ್ಣಿಸುತ್ತಾರೆ.) ಸರ್ವೇಶ್ವರನು ಲೋಕಗಳನ್ನೆಲ್ಲಾ ಭಕ್ಷಿಸಿದ ಸಮಯದಲ್ಲಿ ಕಾಲವಿಭಾಗಗಳೂ, ಪಂಚಭೂತಗಳೂ, ಸಮೂಲವಾದ ಪರ್ವತಗಳೂ, ನಕ್ಷತ್ರಾದಿ ಜ್ಯೋತಿರ್ಮಣ್ಡಲಗಳೂ,—ಎಲ್ಲವೂ ಒಟ್ಟಿಗೆ ನಷ್ಟವಾಗುವಂತೆ ಮಹಾಶಬ್ದವು ಉದ್ಭುದ್ಧವಾಯಿತು. ಆ ಭಕ್ಷಣ ಪ್ರಕಾರವು ಏನು ವಿಚಿತ್ರವಾದುದೋ!

(೫) ಊಣುಡೈಮಲ್ಲರ್ ತದರ್ನ್ದವೊಲಿ, ಮನ್ನರ್
ಆಣುಡೈ ಚ್ಚೇನೈ ನಡುಂಬುಗ್ಗುಮೊಲಿ. ವಿಣ್ಣುಳ್
ಏಣುಡೈ ತ್ತೇವರ್ ವೆಳಿಪ್ಪಟ್ಟವೊಲಿ, ಅಪ್ಪನ್
ಕಾಣುಡೈ ಪ್ಪಾರತಮ್ ಕೈಯಾತ್ತ್ಪೋದೇ.

ಪ್ರ|| ಅಪ್ಪನ್ - ಆಶ್ರಿತವತ್ಸಲನಾದ ಕೃಷ್ಣನು, ಕಾಣ್ಉಡೈ-ದರ್ಶನೀಯ ವಾದ, ಪಾರತಮ್-ಭಾರತಯುದ್ಧವನ್ನು, ಕೈ-ಸ್ವೀಕರಿಸಿ, ಆತ್ತ್ಪೋದು-ಯುದ್ಧಮಾಡಿದ ಸಮಯದಲ್ಲಿ, ಊಣ್ಉಡೈ - ಬಲಪ್ರದವಾದ ಆಹಾರವುಳ್ಳ, ಮಲ್ಲರ್-ಮಲ್ಲಜಟ್ಟಿಗಳು, ತದರ್ನ್ದ-ಭಗ್ನರಾಗಿ ಬೀಳುವ, ಒಲಿ-ಶಬ್ದವೂ, ಮನ್ನರ್ -ರಾಜರ, ಆಣ್ ಉಡೈ-ಪೌರುಷವುಳ್ಳ, ಶೇನೈ-ಸೇನೆಗಳು, ನಡುಂಬುಗ್ಗುಮ್-ನಡು ಗುವ, ಒಲಿ-ಶಬ್ದವೂ, ವಿಣ್ಣುಳ್-ಆಕಾಶದಲ್ಲಿ, ಏಣ್ಉಡೈ-ತಮ್ಮತಮ್ಮ ಸಾನ್ಧ

ಗೌರವವುಳ್ಳ, ತೇವರ್-ಮುಖ್ಯದೇವತೆಗಳು, ವೇಳಿಪ್ಪಟ್ಟ-(ಯುದ್ಧವನ್ನು ನೋಡು ವುದಕ್ಕಾಗಿ ಬಂದು) ಪ್ರತ್ಯಕ್ಷವಾಗಿ ನಿಂತು ಸ್ತೋತ್ರಮಾಡುವ, ಒಲಿ - ಶಬ್ದವೂ, ಇವೆಲ್ಲವೂ ಸೇರಿ ಇದ್ದುವು.

( ಸ-ಗಾ-ರ ॥ )—

ದೇವಸ್ಯ ವೃತ್ತಮಿಹ ಭಾರತಯುದ್ಧಕಾಲೇ
ದಿವ್ಯಂ ಹಿ ಮಲ್ಲಕರಣೀಃ ಪ್ರಬಲಾ ಚ ಭಗ್ನಾ |
ರಾಜ್ಞಾಂ ಬಲಿಷ್ಠಪೃತನಾಃ ಕಿಲ ಕಮ್ಪಿತಾಸ್ತಾಃ
ಸ್ವಸ್ಥಾಸ್ಸುರಾಶ್ಚ ಪುರತಃ ಪ್ರಬಲೈಶ್ಚ ಶಬ್ದೈಃ ||

ತಾ॥ (ಕೃಷ್ಣಾವತಾರವೈಭವವನ್ನು ವರ್ಣಿಸುತ್ತಾರೆ.) ಶ್ರೀ ಕೃಷ್ಣನು ಭಾರತ ಯುದ್ಧಕಾಲದಲ್ಲಿ ಸಾರಥ್ಯವನ್ನು ಮಾಡುತ್ತ ಯುದ್ಧವನ್ನು ಕೈಕೊಂಡಾಗ, ಬಲಿಷ್ಠ ರಾದ ಮಲ್ಲರು ಭಗ್ನರಾಗಿ ಕೆಳಗೆಬೀಳುವ ಶಬ್ದವೂ, ರಾಜರ ಸೈನ್ಯಗಳು ಭಯ ದಿಂದ ನಡುಗುವ ಶಬ್ದವೂ, ಆಕಾಶದಲ್ಲಿ ದೇವತೆಗಳು ಯುದ್ಧದರ್ಶನಕ್ಕಾಗಿ ಬಂದು ನಿಂತು ಸ್ತೋತ್ರಮಾಡುವ ಶಬ್ದವೂ — ಈ ಶಬ್ದಗಳೆಲ್ಲಾ ಒಟ್ಟಿಗೆ ಸೇರಿದ್ದುವು.

(೬) ಪೋೞ್ದು ಮೆಲಿನ್ದ ಪುನ್ ಶೆಕ್ಕರಿಲ್, ವಾನ್ ತಿಶೈ
ಶೂೞುಮೆೞುನ್ದುದಿರ ಪ್ಪುನಲಾ, ಮಲೈ
ಕೀೞ್ದು ಪಿಳನ್ದ ಶಿಙ್ಗಮೊತ್ತದಾಲ್, ಅಪ್ಪನ್
ಆೞ್ ತುಯರ್ ಶೆಯ್ದ್ದಶುರರೈ ಕೊಲ್ಲುಮಾತೇ.

ಪ್ರ॥ ಪೋೞ್ದು-ಹಗಲು, ಮೆಲಿನ್ದ-ನಷ್ಟವಾದಾಗ, ಪುನ್-ಅಲ್ಪವಾದ, ಶೆಕ್ಕರಿಲ್-ಸನ್ಧ್ಯಾರಾಗದಂತೆ ಕೆಂಪಾದ, ವಾನ್-ಆಕಾಶವೂ, ತಿಶೈ-ದಿಕ್ಕುಗಳೂ, ಶೂೞುಮ್ ಎೞುನ್ದು-ಸುತ್ತಲೂ ಎದ್ದು, ಉದಿರಪ್ಪುನಲ್ ಆ-ರಕ್ತಪ್ರವಾಹವಾಗು ವಂತೆ, ಅಪ್ಪನ್-ನರಸಿಂಹರೂಪಿಯಾದ ಸ್ವಾಮಿಯು, ಆೞ್ ತುಯರ್ ಶೆಯ್ದು-ಮಹಾ ಸನ್ತಾಪವನ್ನು ಉಂಟುಮಾಡಿ, ಅಶುರರೈ-ಹಿರಣ್ಯಾಸುರನನ್ನು, ಕೊಲ್ಲುಮಾೞು- ಕೊಂದಪ್ರಕಾರವು, ಮಲೈಕೀೞ್ದು-ಬೆಟ್ಟವು ಕೆಳಗೆ ಇರುವಂತೆ, ಪಿಳನ್ದ-(ಅದರ ಮೇಲೆ ಹತ್ತಿ) ಬೆಟ್ಟವನ್ನು ಸೀಳದ, ಶಿಙ್ಗಮೊತ್ತದಾಲ್-ಸಿಂಹದಂತೆ ಇದ್ದಿತು.

( ಸ-ಗಾ-ರ ॥ )—

ದೇವೋ ದಿನಾನ್ತಸಮಯೇ ಗಗನೇ ಚ ದಿಕ್ಷು
ಪ್ರಾಗೇವ ಶೋಣಿತಸರಿತ್ಪ್ರಸರಾನ್ ಪ್ರವಾಹ್ಯ ।
ದೈತ್ಯಾಸುರಪ್ರಮಥನಂ ಕೃತವಾನಿತೀದಂ
ತ್ವದ್ರೇರ್ಹಿ ಕೇಸರಿಕೃತಂ ಚ ವಿದಾರಣಂ ಸ್ಯಾತ್ ॥

ತಾ॥ (ನರಸಿಂಹಾವತಾರ ವೈಭವವನ್ನು ವರ್ಣಿಸುತ್ತಾರೆ.) ಹಗಲು ಅತಿಕ್ರಮಿಸಿ ಸನ್ಧ್ಯಾಕಾಲವು ಬಂದಾಗ, ಆಕಾಶದಲ್ಲೂ ದಿಕ್ಕುಗಳಲ್ಲೂ ಸನ್ಧ್ಯಾರಾಗವು ವ್ಯಾಪಿಸಿ ರಕ್ತಪ್ರವಾಹವಾಗಿರುವಂತೆ, ಶ್ರೀ ನರಸಿಂಹಸ್ವಾಮಿಯು ಹಿರಣ್ಯಾಸುರನನ್ನು ಕೊಂದಪ್ರಕಾರವು—ಒಂದು ಬೆಟ್ಟದಮೇಲೆ ಸಿಂಹವು ಕುಳಿತು ಆ ಬೆಟ್ಟವನ್ನು ಸೀಳಿದಂತೆ ಇದ್ದಿತು.

(೭) ವಾೞುನಿರೈತ್ತಿರೈಕ್ಕುಮ್ ಶರಙ್ಗಳ್, ಇನ
ನೂೞು ಪಿಣ ಮಲೈಪೋಲ್ ಪುರಳ, ಕಡಲ್
ಆೞು ಮಡುತ್ತುದಿರಪ್ಪುನಲಾ, ಅಪ್ಪನ್
ನೀೞು ಪಡವಿಲಙ್ಗೈ ಶೆಱ್ಱ ನೇರೇ.

ಪ್ರ॥ ವಾೞು-ಎರಡು ಕಡೆಗಳಿಂದಲೂ ಎದುರೆದುರಿಗೆ, ನಿರೈತ್ತು-ಸಾಲುಸಾಲಾಗಿ ಹೊರಟು, ಇರೈಕ್ಕುಮ್-ಘೋಷಿಸುವ, ಶರಙ್ಗಳ್-ಬಾಣಗಳಿಂದ, ಇನ-ಗುಂಪುಗುಂಪಾಗಿ, ನೂೞು-ಅನೇಕ ಶತಸಂಖ್ಯಾಕವಾದ, ಪಿಣಮ್ - ರಾಕ್ಷಸಶವಗಳು, ಮಲೈಪೋಲ್ ಬೆಟ್ಟಗಳಂತೆ, ಪುರಳ-ಹೊರಳಿ ಬೀಳುತ್ತಿರಲು, ಆೞು ಮಡುತ್ತು - (ಸಮುದ್ರದಲ್ಲಿ ತುಂಬಿದ ಆ ರಕ್ತವು) ನದೀಮುಖವಾಗಿ ಹಿಂದಕ್ಕೆ ಹೊರಟು ಪೂರ್ಣವಾಗಿ, ಕಡಲ್ - ಸಮುದ್ರವು, ಉದಿರಪ್ಪುನಲ್ ಆ - ರಕ್ತಜಲಮಯವಾಗುವಂತೆ, ಅಪ್ಪನ್-ಶ್ರೀರಾಮಸ್ವಾಮಿಯು, ಇಲಙ್ಗೈ-ಲಙ್ಕಾನಗರವನ್ನು, ನೀೞು ಪಡ-ಧೂಳಿಯಾಗುವಂತೆ, ಶೆಱ್ಱ-ನಾಶಪಡಿಸಿದ, ನೇರೇ-ಸಮಯವು ಇದ್ದಿತು (ವೈಭವವು ಹಾಗೆ ಇದ್ದಿತು).

( ಸ-ಗಾ-ರ ॥ )—

ಉದ್ಘೋಷಶಾಲಿಶರವರ್ಷಗಣೈಃ ಕೃತಾನಾಂ
ರಕ್ಷಃಕುಲಸ್ಯ ನಿಧನೇ ರುಧಿರಪ್ರವಾಹಾಃ ।
ಅಬ್ಧಿಂ ಚ ರಕ್ತಮಯಮೇವ ಹಿ ಕುರ್ವತೇ ಸ್ಮ
ಶ್ರೀಶೋ ಹರಿಸ್ಸಮಹರತ್ತು ಯದಾ ಚ ಲಙ್ಕಾಮ್ ॥

ತಾ|| (ಶ್ರೀರಾಮಾವತಾರದ ವೈಭವವನ್ನು ವರ್ಣಿಸುತ್ತಾರೆ.) ಎರಡು ಕಡೆಗಳಿಂದಲೂ ಬಾಣವರ್ಷಗಳು ಎದುರೆದುರಿಗೆ ಸಾಲುಸಾಲಾಗಿ ಹೊರಟು ಘೋಷಿಸುತ್ತಿರುವಾಗ ಆ ಬಾಣಗಳಿಂದ ಹತವಾದ ಅನೇಕಶತರಾಕ್ಷಸರ ಶರೀರಗಳು ಬೆಟ್ಟಗಳಂತೆ ಹೊರಳಿಬೀಳುತ್ತಿರಲು, ರಕ್ತಪ್ರವಾಹವು ಸಮುದ್ರದಲ್ಲೆಲ್ಲಾ ತುಂಬಿ ನದಿಗಳ ಕಡೆಗೆ ತಿರುಗಿ ಪ್ರವಹಿಸುವಂತೆ, ಶ್ರೀರಾಮಸ್ವಾಮಿಯು ಲಂಕಾನಗರವನ್ನು ಧೂಳಿಯಾಗಿ ನಾಶಪಡಿಸಿದ ವೈಭವವು ಪ್ರಕಾಶಿಸಿತು.

(೮) ನೇರ್‌ಶರಿನ್ದಾನ್ ಕೊಡಿಕ್ಕೋೞಿಕೊಣ್ಡಾನ್, ಪಿನ್ನುಮ್
ನೇರ್‌ಶರಿನ್ದಾನೆರಿಯುಮನಲೋನ್, ಪಿನ್ನುಮ್
ನೇರ್‌ಶರಿನ್ದಾನ್ ಮುಕ್ಕಣ್ ಮೂರ್ತ್ತಿಕಣ್ಡೀರ್, ಅಪ್ಪನ್
ನೇರ್‌ಶರಿವಾಣನ್ ತಿಣ್‌ತೋಳ್ ಕೊಣ್ಡವನ್ಱೇ.

ಪ್ರ|| ಅಪ್ಪನ್-(ಅನಿರುದ್ಧನಿಗೆ ಉಪಕಾರಕನಾದ) ಕೃಷ್ಣಸ್ವಾಮಿಯು, ನೇರ್‌ಶರಿ-ಎದುರಿಗೆ ನಿಲ್ಲದೆ ಹಿಂತಿರುಗಿ ಓಡುತ್ತಿದ್ದ, ವಾಣನ್-ಬಾಣನ, ತಿಣ್‌ತೋಳ್-ದೃಢವಾದ ತೋಳುಗಳನ್ನು, ಕೊಣ್ಡವನ್ಱೇ-ಛೇದಿಸಿ ಜಯಿಸಿದ ವೇಳೆಯಲ್ಲಿ, ಕೋೞಿ ಕೊಡಿಕೊಣ್ಡಾನ್-ಕುಕ್ಕುಟಧ್ವಜನಾದ ಸುಬ್ರಹ್ಮಣ್ಯನು, ನೇರ್‌ಶರಿನ್ದಾನ್-ಎದುರಿಗೆ ನಿಲ್ಲದೆ ತಪ್ಪಿಸಿಕೊಂಡು ಓಡಿಹೋದನು. ಪಿನ್ನುಮ್-ಮತ್ತೂ, ಎರಿಯುಮ್-ಜ್ವಲಿಸುವ, ಅನಲೋನ್-ಅಗ್ನಿಯು, ನೇರ್‌ಶರಿನ್ದಾನ್-ಎದುರಿಗೆ ನಿಲ್ಲದೆ ತಪ್ಪಿಸಿಕೊಂಡನು. ಪಿನ್ನುಮ್-ಮತ್ತೂ, ಮುಕ್ಕಣ್ ಮೂರ್ತ್ತಿ-ತ್ರಿಣೇತ್ರನಾದ ರುದ್ರನೂ, ನೇರ್‌ಶರಿನ್ದಾನ್-ತಪ್ಪಿಸಿಕೊಂಡು ಓಡಿಹೋದನು, ಕಣ್ಡೀರ್-ಕಂಡಿರಷ್ಟೆ !

( ಸ-ಗಾ-ರ || )—

ಬಾಣಾಸುರಸ್ಯ ಬಹುಬಾಹುಶತಿಪ್ರಭೇತ್ತ್ರಾ
ದೇವೋ ಯದಾ ಕಿಲ ತದಾ ಧ್ವಜಕುಕ್ಕುಟೇಶಃ ।
ಜ್ವಾಲಾಮಯೋಽಪಿ ದಹನಶ್ಚ ಸ ಚ ತ್ರಿಣೇತ್ರ-
ಸ್ಸರ್ವೇ ಪಲಾಯನಕರಾಸ್ಸಕಲೈರ್ಹಿ ದೃಷ್ಟಾಃ ॥

ತಾ|| (ಬಾಣಾಸುರ ಬಾಹುಚ್ಛೇದವನ್ನು ವರ್ಣಿಸುತ್ತಾರೆ.) ಶ್ರೀಕೃಷ್ಣನು ಬಾಣಾಸುರನ ತೋಳುಗಳನ್ನು ಕತ್ತರಿಸಿದವೇಳೆಯಲ್ಲಿ ಕುಕ್ಕುಟಧ್ವಜನಾದ ಸುಬ್ರಹ್ಮಣ್ಯನೂ, ಪ್ರಜ್ವಲಿಸುವ ಅಗ್ನಿಯೂ, ತ್ರಿಣೇತ್ರನಾದ ರುದ್ರನೂ—ಎಲ್ಲರೂ ತಪ್ಪಿಸಿಕೊಂಡು ಹಿಂತಿರುಗಿ ಓಡಿಹೋದರು—ಇದನ್ನು ಎಲ್ಲರೂ ಕಂಡಿರಷ್ಟೆ !

(೯) ಅನ್ಱು ಮಣ್ಣೀರೆರಿಕಾಲ್ ವಿಣ್ ಮಲೈಮುದಲ್
ಅನ್ಱು ಶುಡರಿರಣ್ಡು ಪಿಱವುಮ್, ಪಿನ್ನುಮ್
ಅನ್ಱು ಮೞೈಯುಯಿರ್ ತೇವುಮ್ ಮಱ್ಱುಮ್, ಅಪ್ಪನ್
ಅನ್ಱು ಮುದಲುಲಕಮ್ ಶೆಯ್ದದುಮೇ.

ಪ್ರ|| ಅಪ್ಪನ್-ಜಗತ್ಕಾರಣವಸ್ತುವಾದ ಸ್ವಾಮಿಯು, ಮುದಲ್-ಆದಿಯಲ್ಲಿ, ಉಲಕಮ್‌ಶೆಯ್ದದುಮ್ - ಲೋಕಗಳನ್ನು ಸೃಷ್ಟಿಸಿದುದೂ, ಅನ್ಱು-ಆ ಕಾಲದಲ್ಲಿ, ಮಣ್-ಭೂಮಿಯನ್ನೂ, ನೀರ್-ನೀರನ್ನೂ, ಎರಿ-ಅಗ್ನಿಯನ್ನೂ, ಕಾಲ್-ವಾಯುವನ್ನೂ, ವಿಣ್ - ಆಕಾಶವನ್ನೂ, ಮಲೈಮುದಲ್ - ಪರ್ವತ ಮುಂತಾದ ವಸ್ತುಗಳನ್ನೂ, ಶೆಯ್‌ದದುಮ್-ಸೃಷ್ಟಿಮಾಡಿದುದೂ, ಅನ್ಱು-ಆ ಕಾಲದಲ್ಲಿ, ಶುಡರ್ ಇರಣ್ಡು-ಚನ್ದ್ರ ಸೂರ್ಯರಿಬ್ಬರನ್ನೂ, ಪಿಱವುಮ್-ಮಿಕ್ಕ ತೇಜೋದ್ರವ್ಯಗಳನ್ನೂ, ಶೆಯ್‌ದದುಮ್-ಮಾಡಿದುದೂ, ಅನ್ಱು - ಆ ಕಾಲದಲ್ಲಿ, ಪಿನ್ನುಮ್ - ಮತ್ತೂ, ಮೞೈ-ಮಳೆಯನ್ನೂ, ಉಯಿರ್-ಪ್ರಾಣಿಗಳನ್ನೂ, ತೇವುಮ್- ದೇವತೆಗಳನ್ನೂ, ಮಱ್ಱುಮ್-ಮಿಕ್ಕ ಜೀವರಾಶಿಗಳನ್ನೂ, ಶೆಯ್‌ದದುಮ್-ಸೃಷ್ಟಿಸಿದುದೂ, ಅನ್ಱೇ-ಆ ಕಾಲದಲ್ಲೇ.

( ಸ-ಗಾ-ರ || )—

ದೇವೋ ಯದಾ ತು ಜಗತಾಮಪಿ ಸರ್ಗಕರ್ತಾ
ಭೂಮಿಂ ಜಲಂ ಚ ದಹನಾನಿಲವ್ಯೋಮಮಾರ್ಗಾನ್ |
ಅದ್ರೀನ್ ರವಿಂ ಚ ಶಶಿನಂ ಮಹಸಾಂ ತತೀಶ್ಚ
ವೃಷ್ಟಿಂ ಚ ದೇವನಿವಹಾನಕರೋತ್ತದಾऽನ್ಯಾನ್ ||

ತಾ|| (ಜಗತ್ಸೃಷ್ಟಿಪ್ರಕಾರವನ್ನು ವರ್ಣಿಸುತ್ತಾರೆ). ಜಗತ್ಕಾರಣವಸ್ತುವಾದ ಸ್ವಾಮಿಯು ಆದಿಯಲ್ಲಿ ಲೋಕಗಳನ್ನು ಸೃಷ್ಟಿಸಿದಾಗ ಪೃಥಿವ್ಯಪ್ತೇಜೋವಾಯ್ವಾಕಾಶಗಳನ್ನೂ, ಪರ್ವತಾದಿಗಳನ್ನೂ, ಚನ್ದ್ರಸೂರ್ಯಾದಿ ತೇಜೋಗೋಳಗಳನ್ನೂ, ವೃಷ್ಟಿಯನ್ನೂ, ಪ್ರಾಣಿವರ್ಗಗಳನ್ನೂ, ದೇವತೆಗಳನ್ನೂ, ಮಿಕ್ಕ ಜೀವರಾಶಿಗಳನ್ನೂ ಸಹ ಸೃಷ್ಟಿಮಾಡಿದನು.

(೧೦) ಮೇಯ್ಯಾ ನಿರೈ ಕೀೞ್ ಪುಕ ಮಾಪುರಳ, ಶುನೈ
ವಾಯಿಲ್ ನಿಱೈ ನೀರ್ ಪಿಳಿಱಿಚ್ಚೊರಿಯ, ಇನ
ಆನಿರೈ ಪಾಡಿ ಯಙ್ಗೇ ಯೊಡುಙ್ಗ, ಅಪ್ಪನ್
ತೀಮೞೈಕಾತ್ತು ಕುನ್ಱಮೆಡುತ್ತಾನೇ.

ಪ್ರ॥ ಮೇಯ್-ಮೇಯುತ್ತಿರುವ, ನಿರೈ - ಪಶುಗಳು, ಕೀೞ್ಪುಕ-ಬೆಟ್ಟದ ಕೆಳಗೆ ಸೇರಿಕೊಳ್ಳುವಂತೆಯೂ, ಮಾ-ಆನೆ ಮುಂತಾದ ಬೆಟ್ಟದ ಮೃಗಗಳು, ಪುರಳ - (ಬೆಟ್ಟವು ತಲೆಕೆಳಗೆ ಆದುದರಿಂದ) ಹೊರಳಿಬೀಳುವಂತೆಯೂ, ಶುನೈವಾಯ್ ನಿಱೈ-ಪ್ರವಾಹಗಳ ಮುಖಗಳಲ್ಲೆಲ್ಲಾ ತುಂಬಿದ, ನೀರ್-ನೀರು, ಪಿಳಿಱಿ-ಮಹಾ ಘೋಷದೊಡನೆ, ಶೊರಿಯ - ಹರಿಯುವಂತೆಯೂ, ಇನಮ್-ಗುಂಪುಗುಂಪಾದ, ಆಯ್-ಗೋಪರನ್ನೂ, ನಿರೈ-ಪಶುಸಂಘವನ್ನೂ ಉಳ್ಳ, ಪಾಡಿ - ಗೋಕುಲವು, ಅಙ್ಗೇ-ಆ ಪರ್ವತದ ಕೆಳಗೇ, ಒಡುಙ್ಗ-ಛಾಯೆಯಲ್ಲಿ ನಿರ್ಭಯವಾಗಿರುವಂತೆಯೂ, ಅಪ್ಪನ್-ಆಪನ್ನಿವಾರಕನಾದ ಕೃಷ್ಣನು, ತೀಮೞೈ-(ಇನ್ದ್ರನಿಂದ ಸೃಷ್ಟಿಸಲ್ಪಟ್ಟ) ದುಷ್ಟವಾದ (ಘೋರವಾದ) ಮಳೆಯನ್ನು, ಕಾತ್ತು-ತಡೆದು, ಕುನ್ಱಮ್-(ಗೋವರ್ಧನ) ಗಿರಿಯನ್ನೂ, ಎಡುತ್ತಾನೇ-ಎತ್ತಿದನಷ್ಟೆ!

( ಸ-ಗಾ-ರ ॥ )—

ಘಾಸೋದ್ಯತಾಶ್ಚ ಪಶವೋಽದ್ರಿತಲಾದಧಸ್ತಾತ್
ಸಂರಕ್ಷಿತಾ ನಿಪತಿತಾಶ್ಚ ಗಿರೇರ್ಗಜಾದ್ಯಾಃ ।
ಅತ್ಯುತ್ಕಟಾಶ್ಚ ಸರಿತಸ್ತು ಹರಿಃ ಪ್ರವರ್ಷಾ-
ತ್ತ್ರಾತುಂ ಚ ಗೋಕುಲಜನಾನ್ ಗಿರಿಧೃದ್ಯದಾಽಽಕ್ಷೀತ್ ॥

ತಾ॥ (ಗೋವರ್ಧನೋದ್ಧರಣವನ್ನು ವರ್ಣಿಸುತ್ತಾರೆ.) ಮೇಯುತ್ತಿರುವ ಪಶುಗಳು ಸುರಕ್ಷಿತವಾಗಿ ಪರ್ವತದ ಕೆಳಗೆ ಇರುವಂತೆಯೂ, ಗಜಾದಿ ವನಮೃಗಗಳು ಹೊರಳಿಬೀಳುವಂತೆಯೂ, ಗಿರಿಪ್ರವಾಹಗಳು ಮಹಾಘೋಷದೊಡನೆ ವರ್ಷಿಸುವಂತೆಯೂ, ಗೋಗೋಪಸಂಘಗಳೊಡನೆ ಕೂಡಿದ ಗೋಕುಲವೆಲ್ಲಾ ಆ ಪರ್ವತದ ಛಾಯೆಯನ್ನು ಆಶ್ರಯಿಸಿ ನಿರ್ಭಯವಾಗಿರುವಂತೆಯೂ, ಶ್ರೀಕೃಷ್ಣನು ಗೋವರ್ಧನಗಿರಿಯನ್ನು ಎತ್ತಿ ಇನ್ದ್ರಪ್ರೇರಿತವಾದ ಕೆಟ್ಟ ಮಳೆಯನ್ನು ತಡೆದು ಎಲ್ಲರನ್ನೂ ಸಂರಕ್ಷಿಸಿದನು.

(೧೧) ಕುನ್ಱಮೆಡುತ್ತ ಪಿರಾನಡಿಯಾರೊಡುಮ್,
ಒನ್ಱಿನಿನ್ಱ ಶಡಕೋಪನುರೈಶೆಯಲ್,
ನನ್ಱಿಪುನೈನ್ದ ಓರಾಯಿರತ್ತುಳ್ಳಿವೈ,
ವೆನ್ಱಿತರುಮ್ ಪತ್ತುಮ್ ಮೇವಿಕ್ಕಱ್ಪಾರ್ಕ್ಕೇ.

ಪ್ರ॥ ಕುನ್ಱಮೆಡುತ್ತ–ಗೋವರ್ಧನಗಿರಿಯನ್ನು ಎತ್ತಿದ, ಪಿರಾನ್–ಸ್ವಾಮಿಗೆ, ಅಡಿಯಾರೊಡುಮ್–ದಾಸಭೂತರಾದ ಭಾಗವತರೊಡನೆ, ಒನ್ಱಿ ನಿನ್ಱ–ಸೇರಿ ನಿಂತ, ಶಡಕೋಪನ್–ಶಠಾರಿಮುನಿಯು, ಉರೈಶೆಯಲ್ – ಹೇಳಿ (ಸ್ತೋತ್ರರೂಪವಾಗಿ) ರಚಿಸಿದ, ಓರ್–ಅದ್ವಿತೀಯವಾದ, ಆಯಿರತ್ತುಳ್–ಸಹಸ್ರಪದ್ಯಮಾಲೆಯೊಳು, ನನ್ಱಿಪುನೈನ್ದ–(ಸರ್ವೇಶ್ವರನ ವಿಜಯಸೂಚಕವಾದ) ಶುಭಗುಣಭರಿತವಾದ, ಇವೈ ಪತ್ತುಮ್–ಈ ಹತ್ತುಪದ್ಯಗಳು, ಮೇವಿ–ಅರ್ಥಸಹಿತವಾಗಿ, ಕಱ್ಪಾರ್ಕ್ಕು–ಅಭ್ಯಸಿಸುವವರಿಗೆ, ವೆನ್ಱಿ–ಜಯವನ್ನು, ತರುಮ್–ಉಂಟುಮಾಡುವುವು.

( ಸ–ಗಾ–ರ ॥ )—

ಗೋವರ್ಧನೋದ್ಧರಣಕೃತ್ಪ್ರಭುಭಕ್ತವರ್ಗೈ-
ರ್ಯಸ್ಸಙ್ಗತೋಽಸ್ತಿ ಶಠಜಿತ್ಸ್ವತತಂ ತದೀಯೇ ।
ಸಾಹಸ್ರಿಕೇ ತು ದಶಕಂ ತದಿದಂ ಪಠನ್ತ-
ಸ್ಸರ್ವತ್ರ ಚಾಪಿ ಜಯಮೇವ ಸದಾ ಲಭನ್ತೇ ॥

ತಾ॥ (ಈ ದಶಕವು ಪಠನಮಾಡುವವರಿಗೆ ವಿಜಯಪ್ರದವೆಂದು ಹೇಳುತ್ತಾರೆ.) ಗೋವರ್ಧನೋದ್ಧಾರಮಾಡಿದ ಸ್ವಾಮಿಗೆ ದಾಸಭೂತರಾದ ಭಾಗವತರೊಡನೆ ಸೇರಿ ಅವರ ಗೋಷ್ಠಿಯಲ್ಲಿ ನಿಂತಿರುವ ಶ್ರೀ ಶಠಾರಿಮುನಿಯಿಂದ ವಿರಚಿತವಾದ ದಿವ್ಯಪ್ರಬನ್ಧವಾದ ಸಹಸ್ರಪದ್ಯಮಾಲೆಯೊಳು ಈ ದಶಕವು ಅರ್ಥಸಹಿತವಾಗಿ ಪಠನಮಾಡುವವರಿಗೆ ಸರ್ವಕಾರ್ಯಗಳಲ್ಲೂ ಜಯವನ್ನು ಉಂಟುಮಾಡುವುದು.

( ದ್ರ–ಉ–ಸಂ ॥ )—

ಆತನ್ವತಾ ಹಿತಮಥಾತ್ಮದಶಾನುರೂಪ-
ಮಾವಿಷ್ಕೃತಾನನುಪಮಾನ್ ಪುರುಷೋತ್ತಮೇನ ।
ಆತ್ಮಪ್ರದಾನವಿಭವಾನತಿಲೋಭನೀಯಾ-
ನಧ್ಯಕ್ಷಯನ್ ಶಠಜಿದನ್ವಭವಚ್ಚತುರ್ಥೇ ॥

( ಧ್ರು-ಉ-ತಾ-ರ ॥ )—

ವಿಕ್ರಾನ್ತ್ಯಾ ವಿಷ್ಣುಪಾನಾಮಮೃತಮಥನತಶ್ಶೋದ್ಧೃತೇರ್ಭೂತಧಾತ್ರ್ಯಾಃ
ಕಲ್ಪೇ ಲೋಕಾದನಾಚ್ಚ ಕ್ಷಿತಿಭರಹರಣಾದ್ದೈತ್ಯರಾಜಪ್ರಹಾರಾತ್ ।
ಲಙ್ಕಾಸಙ್ಕ್ಷೋಚಕತ್ವಾದಸುರಭುಜವನಚ್ಛೇದನಾಲ್ಲೋಕಸೃಷ್ಟೇ-
ರ್ಧೃತ್ಯಾ ಗೋವರ್ಧನಾದ್ರೇಸ್ಸ್ಫುಟಜಗದವನಪ್ರಕ್ರಿಯಾಂ ಶ್ರೀಶಮಾಹ ॥

( ಈ ಚತುರ್ಥದಶಕದ ಸಾರಾಂಶ— )

ಈ ನಾಲ್ಕನೆಯದಶಕದಲ್ಲಿ--ಶ್ರೀ ಶಠಾರಿಮುನಿವರ್ಯರು ಭಗವನ್ತನ ಅವತಾರ ವೈಭವಗಳನ್ನು ಅನುಭವಿಸಬೇಕೆಂದು ಉದ್ದೇಶಿಸಿ, ಕ್ರಮೇಣ ತ್ರಿವಿಕ್ರಮಾವತಾರ — ಸಮುದ್ರಮಥನ — ವರಾಹಾವತಾರ — ಪ್ರಳಯಕ್ರಮ—ಕೃಷ್ಣಾವತಾರ--- ನರಸಿಂಹಾವತಾರ—ಶ್ರೀರಾಮಾವತಾರ—ಬಾಣಾಸುರವಧ— ಜಗತ್ಸೃಷ್ಟಿಕ್ರಮ —ಗೋವರ್ಧನೋದ್ಧರಣವೆಂಬ ಈ ಅವತಾರವಿಜಯಗಳನ್ನು ಅನುಸನ್ಧಾನಮಾಡಿ ವರ್ಣಿಸಿ, ಈ ದಶಕವನ್ನು ಪಠನಮಾಡುವವರಿಗೆ ಸರ್ವಕಾರ್ಯಗಳಲ್ಲೂ ಜಯವುಂಟಾಗುವುದೆಂದು ಫಲವನ್ನೂ ಸೂಚಿಸಿ ಇರುತ್ತಾರೆ.

—:❖:—

ಶ್ರೀಃ

## ಸಪ್ತಮಶತಕದಲ್ಲಿ—ಪಞ್ಚಮದಶಕ.

(ಕಣ್ಣಾರಾಮಪಿರಾನ್ನೈ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ವಿಭವಾವತಾರದ ಗುಣಗಣಗಳನ್ನು ಅನುಸನ್ಧಾನಮಾಡಿ ಯಾರೂ ಅನ್ಯಾಶ್ರಯಣವಂ ಮಾಡಲಾರರೆಂದು—ನಿರ್ಣಯಿಸುತ್ತಾರೆ.)

---

(೧) ಕಣ್ಣಾರಿರಾಮಪಿರಾನ್ನೈಯಲ್ಲಾಲ್ ಮಱ್ಱುಮ್ ಕಱ್ಪರೋ,
ಪುಣ್ಣಾಮುದಲಾ ಪ್ಪುಲ್ಲ್ಣುಮ್ಬಾದಿ ಯೊನ್ಱಿನ್ಱಿಯೇ,
ನಣ್ಣಾಲಯೋತ್ತಿಯಿಲ್ ವಾೞುಮ್ ಶರಾಶರಮ್
ಮುಱ್ಱವುಮ್,
ನಣ್ಣಾಲುಕ್ಕುಯ್‌ತ್ತನನ್ ನಾನ್ಮುಕನಾರ್ ಪೆಱ್ಱ ನಾಟ್ಟುಳೇ.

ಪ್ರ|| ಪಾ-ಬೆಳೆದು ಹರಡಿಕೊಂಡಿರುವ, ಪುಲ್‌ಮುದಲಾ-ಹುಲ್ಲು ಮೊದಲಾದವುಗಳನ್ನೂ, ಪುಲ್ ಎಱುಮ್ಬು ಆದಿ-ಅತಿಕ್ಷುದ್ರವಾದ ಇರುವೆ ಮೊದಲಾದುವುಗಳನ್ನೂ, ನಱ್ಪಾಲ್ - (ರಾಮನ ಗುಣಾನುಸನ್ಧಾನವುಳ್ಳ) ಒಳ್ಳೇ ಪ್ರದೇಶವಾದ ಅಯೋತ್ತಿಯಿಲ್-ಅಯೋಧ್ಯಾನಗರದಲ್ಲಿ, ವಾೞುಮ್ - (ಗುಣಾನುಭವ ಪ್ರೀತಿಯುಕ್ತರಾಗಿ) ವಾಸಮಾಡುತ್ತಿರುವ, ಶರಾಶರಮ್-ಚರಾಚರಾತ್ಮಕವಾದ, ಮುಱ್ಱುವುಮ್-ಸಕಲ ಪದಾರ್ಥಗಳನ್ನೂ, ನಾನ್ಮುಕನಾರ್ ಪೆಱ್ಱ-ಚತುರ್ಮುಖ ಸೃಷ್ಟವಾದ, ನಾಟ್ಟುಳ್ಳೇ-ಲೋಕದಲ್ಲಿ, ಒನ್ಱುಇನ್ಱಿಯೇ-(ಉಜ್ಜೀವನೋಪಾಯವೆಂದು) ಒಂದು ಭಾವನೆಯೂ ಇಲ್ಲದೆ ಇದ್ದಾಗ್ಯೂ, ನಱ್ಪಾಲುಕ್ಕು-ಒಳ್ಳೇ ಪ್ರದೇಶವಾದ ಪ್ರಾಪ್ಯಸ್ಥಲದಲ್ಲಿ, ಉಯ್‌ತ್ತನನ್-ಇಟ್ಟನು. (ಆದುದರಿಂದ) ಕಱ್ಪಾರ್-ಕಲಿಯಲು ಆಶೆಯುಳ್ಳವರು, ಇರಾಮ ಪಿರಾನೈ-ಶ್ರೀರಾಮಸ್ವಾಮಿಯನ್ನು, ಅಲ್ಲಾಲ್-ಬಿಟ್ಟರೆ, ಮಱ್ಱುಮ್-ಬೇರೆ ಯಾರನ್ನಾದರೂ, ಕಱ್ಪರೋ-ತಿಳಿದು ಭಜಿಸುವರೋ ?

(ಸ-ಗಾ-ರ || )—

ಸರ್ಗೇ ಚಾಪಿ ಚರಾಚರಾಸ್ಸಮಹಿತಾಯೋಧ್ಯಾಪುರೇ ವಾಸಿನ-
ಸ್ಸರ್ವತ್ರಾಪಿ ಪಿಪೀಲಿಕಾತೃಣಮುಖಾಸ್ಸೃಷ್ಟಾ ಚ ಧಾತುಸ್ಸ್ವಯಮ್ |
ಮುಕ್ತ್ಯೈ ಸಾಧನವರ್ಜಿತಾ ಅಪಿ ಪರಂ ಧಾಮಾವ್ಯಯಂ ಪ್ರಾಪಿತಾಃ
ಕಿಂ ರಾಮನ್ತು ವಿನಾ ಪ್ರಭುಂ ತದಿತರಾಸಕ್ತಾಸ್ಸ್ಮರೇವೋತ್ಸುಕಾಃ?||

ತಾ|| ಚತುರ್ಮುಖ ಸೃಷ್ಟವಾದ ಈ ಪ್ರಪಂಚದಲ್ಲಿ—ಅಯೋಧ್ಯಾನಗರದಲ್ಲಿ ಬಾಳುವ ತೃಣಾದಿ — ಪಿಪೀಲಿಕಾದಿ ಸಕಲ ಚರಾಚರವಸ್ತುಗಳನ್ನೂ (ಸಕಲ ಪ್ರಾಣಿಗಳನ್ನೂ) ಕರ್ಮಯೋಗಾದ್ಯುಪಾಯನಿಷ್ಠೆಯು ಇಲ್ಲದೆ ಇದ್ದಾಗ್ಯೂ—ಸಾಕ್ಷಾದ್ವೈಕುಣ್ಠದಲ್ಲಿ ತನ್ನನ್ನೇ ಆಶ್ರಯಿಸಿ ಆನನ್ದಿಸುವ ನಿತ್ಯಸೂರಿಗಳಂತೆ ಮಾಡಿದ ಶ್ರೀರಾಮರೂಪಿಯಾದ ಭಗವನ್ತನನ್ನು ಹೊರತು ಬೇರೆ ಯಾರನ್ನಾದರೂ ಸೇವಿಸಲಪೇಕ್ಷೆಯುಳ್ಳವರು ಉಂಟೋ? (ಇಂತಹ ಶ್ರೀರಾಮನನ್ನು ಬಿಟ್ಟು ಇನ್ನು ಯಾರನ್ನು ಭಜಿಸುವರು ?)

(೨) ನಾಟ್ಟಿಲ್ ಪಿಱನ್ದವರ್ ನಾರಣಱ್ಕಾಳಱ್ಱೆ ಯಾವರೋ,
ನಾಟ್ಟಿಲ್ ಪಿಱನ್ದು ಪಡಾದನಪಟ್ಟು ಮನಿಶರ್‌ಕ್ಕಾ,
ನಾಟ್ಟೈತ್ತ ನಲಿಯುಮಿರಕ್ಕರ್ರೈ ನಾಡಿ ತ್ತಡಿನ್ದಿಟ್ಟು,
ನಾಟ್ಟೈಯಳಿತ್ತುಯ್ಯಚ್ಚೆಯ್‌ದು ನಡನ್ದಮೈ ಕೇಟ್ಟುಮೇ.

ಪ್ರ|| ನಾಟ್ಟಿಲ್-(ಅಜ್ಞರಿಗೆ ವಾಸಸ್ಥಾನವಾದ) ಈ ಲೋಕದಲ್ಲಿ, ಪಿಱನ್ದು-ಆಶ್ರಿತಸಂರಕ್ಷಣಕ್ಕಾಗಿ (ಕರ್ಮವಶ್ಯರಂತೆ ತಾನೂ) ಹುಟ್ಟಿ, ಪಡಾದನಪಟ್ಟು-ಅತಿ ದುಸ್ಸಹವಾದ ಕ್ಲೇಶಗಳನ್ನು ಅನುಭವಿಸಿ, ಮನಿಶರ್‌ಕ್ಕಾ - (ತನ್ನನ್ನೇ ನಿಂದಿಸುವಂತಹ) ಕೃತಘ್ನರಾದ ಮನುಷ್ಯರಿಗಾಗಿ, ನಾಟ್ಟೈ-ರಾಷ್ಟ್ರವನ್ನೆಲ್ಲಾ, ನಲಿಯುಮ್-ಹಿಂಸಿಸುವ, ಅರಕ್ಕರ್ರೈ-ರಾಕ್ಷಸರನ್ನು, ನಾಡಿ-ಹುಡುಕಿ, ತಡಿನ್ದಿಟ್ಟು-ಧ್ವಂಸಮಾಡಿ, ನಾಟ್ಟೈ ಅಳಿತ್ತು-(ಅನೇಕ ಸಹಸ್ರವರ್ಷಗಳ ಪರ್ಯಂತ) ರಾಜ್ಯಪರಿಪಾಲನವಂಮಾಡಿ, ಉಯ್ಯಚ್ಚೆಯ್ದು-ಅಕಾಲಮರಣಾದಿಭಯವಿಲ್ಲದಂತೆ ಉಜ್ಜೀವನವನ್ನುಂಟುಮಾಡಿ, ನಡನ್ದಮೈ-ಸಶರೀರನಾಗಿಯೂ ಸಪರಿವಾರನಾಗಿಯೂ ಈ ಲೋಕವನ್ನು ಬಿಟ್ಟು ಶ್ರೀರಾಮನು ಪ್ರಯಾಣಮಾಡಿದ ಪ್ರಕಾರವನ್ನು, ಕೇಟ್ಟುಮೇ-(ಶ್ರೀ ರಾಮಾಯಣ ಮೂಲಕವಾಗಿ) ಕೇಳಿ ತಿಳಿದು ಇದ್ದಾಗ್ಯೂ, ನಾಟ್ಟಿಲ್ ಪಿಱನ್ದವರ್-ಈ ಲೋಕದಲ್ಲಿ ಹುಟ್ಟಿರುವ ಜನರು, ನಾರಣಱ್ಕು-ಶ್ರೀಮನ್ನಾರಾಯಣ ರೂಪಿಯಾದ ಶ್ರೀರಾಮನಿಗೆ, ಆಳನ್ಱಿ-ದಾಸ್ಯಮಾಡುವುದನ್ನು ಬಿಟ್ಟು, ಆವರೋ - ಇತರರಿಗೆ ದಾಸರಾಗುವರೋ ?

( ಸ-ಗಾ-ರ || )—

ಜಾತೋಽಸ್ಮಿನ್ ಜಗತಿ ಸ್ವಯಂ ಚ ಬಹುಸನ್ತಾಪಾಕುಲಶ್ಚಾಶ್ರಿತ-
ತ್ರಾಣಾರ್ಥಂ ತು ನಿಶಾಚರಾನ್ ಕುಚರಿತಾನ್ ಪ್ರಧ್ವಂಸ್ಯ ವಿಷ್ಣುರ್ಹರಿಃ |
ಲೋಕಂ ಯಃ ಪರಿಪಾಲಯನ್ ಪುನರಪಿ ಸ್ವಂ ಧಾಮ ಸರ್ವೈರ್ಯಯೌ
ತದ್ವೃತ್ತಂ ಚ ನಿಶಮ್ಯ ಕಿಂ ಭುವಿ ಜನಾ ನಾರಾಯಣಾನ್ಯಾಶ್ರಯಾಃ? ||

ತಾ|| ಆಶ್ರಿತ ಸಂರಕ್ಷಣಕ್ಕಾಗಿ ಈ ಲೋಕದಲ್ಲಿ ಹುಟ್ಟಿ, ಅತಿದುಸ್ಸಹವಾದ ಕ್ಲೇಶಗಳನ್ನು ಅನುಭವಿಸಿ, ಲೋಕಕಂಟಕರಾದ ರಾಕ್ಷಸರನ್ನೆಲ್ಲಾ ಧ್ವಂಸಮಾಡಿ, ಚಿರಕಾಲ ರಾಜ್ಯಪರಿಪಾಲನವಂಮಾಡಿ, ಪ್ರಜೆಗಳನ್ನು ಉಜ್ಜೀವಿಸುವಂತೆ ರಕ್ಷಿಸಿ, ಸಶರೀರನಾಗಿ ಸಪರಿವಾರನಾಗಿ ಶ್ರೀರಾಮನು ಪ್ರಯಾಣಮಾಡಿದ ಪ್ರಕಾರವನ್ನು ತಿಳಿದು, ಈ ಲೋಕದಜನರು ಶ್ರೀಮನ್ನಾರಾಯಣರೂಪಿಯಾದ ಅವನಿಗೆ ಅಲ್ಲದೆ ಬೇರೆ ಯಾರಿಗೆ ದಾಸಭೂತರಾಗುವರು ?

(೩) ಕೇಳ್ಪಾರ್ಗಳ್ ಕೇಶವನ್ ಕೀರ್ತ್ತಿಯಲ್ಲಾಲ್
ಮಱ್ಱುಮ್ ಕೇಳ್ಪರೋ,
ಕೇಳ್ಪಾರ್ ಶೆವಿಶುಡು ಕೀೞ್ಮೈ ವಶವುಕಳೇ ವೈಯುಮ್,
ಶೇಳ್ಪಾಲ್ ಪೞಮ್‌ಪಕೈವನ್ ಶಿಶುಪಾಲನ್, ತಿರುವಡಿ
ತಾಳ್ಪಾಲಡೈನ್ದ ತನ್ಮೈಯಱಿವಾರೈ ಯಱಿನ್ದುಮೇ.

ಪ್ರ॥ ಕೇಳ್ಪಾರ್‌ಶೆವಿ - (ಭಗವದ್ಗುಣಹಾನಿಯನ್ನು) ಕೇಳಲಪೇಕ್ಷಿಸುವವರ ಕಿವಿಯನ್ನೂ ಸುಡುವಂತಹ, ಕೀಳ್ಪುನ್ಮೈವಶವ್ವುಕಳೇ–ಅತಿ ನಿಕೃಷ್ಟವಾದ ನಿಂದಾ ವಚನಗಳನ್ನೇ, ವೈಯುಮ್-ಹೇಳಿ ನಿಂದಿಸುತ್ತಿರುವ, ಶೀಳ್ಪಾಲ್-ಬಹುಕಾಲದಿಂದ, ಪ್ಪೂಮ್‌ಪಕೈವರ್ -- (ಹಿರಣ್ಯ–ರಾವಣಾತ್ಮಕ-ಜನ್ಮಗಳಿಂದಲೂ) ಪುರಾತನ ಶತ್ರುವಾದ, ಶಿಶುಪಾಲನ್-ಶಿಶುಪಾಲನು, ತಿರುವಡಿ-ಶ್ರೀಕೃಷ್ಣರೂಪಿಯಾದ ಭಗವಂತನ, ತಾಳ್ಪಾಲ್–ಪಾದಗಳಲ್ಲಿ, ಅಡೈನ್ದ-ಸಾಯುಜ್ಯವನ್ನು ಪಡೆದ, ತನ್ಮೈ-ಅಸಾಧಾರಣ ಸ್ವಭಾವವನ್ನು, ಅಱಿವಾರ್ – ತಿಳಿದ ಜ್ಞಾನಾಧಿಕರನ್ನು, ಅಱಿನ್ದುಮ್--ತಿಳಿದು ಇದ್ದಾಗ್ಯೂ, ಕೇಳ್ಪಾರ್‌ಕಳ್- (ತಮ್ಮ ಉಜ್ಜೀವನಪ್ರಕಾರವನ್ನು) ಕೇಳಬೇಕೆಂಬ ಅಪೇಕ್ಷೆಯುಳ್ಳವರು, (ಅಂತಹ ಜ್ಞಾನಾಧಿಕರ ಸನ್ನಿಧಿಯಲ್ಲಿ) ಕೇಶವನ್-ಕೇಶಿಯೆಂಬ ಅಶ್ವರೂಪಿಯಾದ ಅಸುರನನ್ನು ಕೊಂದ ಕೃಷ್ಣನ, ಕೀರ್ತಿಯಲ್ಲಾಲ್-(ಪ್ರತಿಕೂಲನಾದ ಶಿಶುಪಾಲನಿಗೆ ಮೋಕ್ಷವನ್ನು ಕೊಟ್ಟ ಕೀರ್ತಿಯನ್ನು ಬಿಟ್ಟು, ಮಱ್ಱುಮ್-ಬೇರೆ ಯಾವುದನ್ನಾದರೂ (ಆಶ್ರಿತರಾದ ವಿಭೀಷಣಾದಿಗಳಿಗೆ ಅಭಯವನ್ನು ಕೊಟ್ಟ ರಾಮಾವತಾರಾದಿ ಕೀರ್ತಿಯನ್ನಾದರೂ), ಕೇಳ್ಪರೋ -- ಕೇಳುವರೋ? (ಕೇಳಲಾರರಷ್ಟೆ!)

( ಸಂ-ಗಾ-ರ ॥ )—

ಶ್ರೋತೄಣಾಂ ಶ್ರವಣಾಗ್ನಿತುಲ್ಯವಚನೈರತ್ಯನ್ತನಿನ್ದಾತ್ಮಕೈ-
ಶ್ಚಿರಂ ಯಃ ಕಿಲ ನಿನ್ದತಿ ಸ್ಮ ಶಿಶುಪಾಲಾಖ್ಯಃ ಪುರಾಣೋ ರಿಪುಃ ।
ಸೋಽಪಿ ಶ್ರೀಹರಿಪಾದಪಙ್ಕಜಯುಗಂ ಪ್ರಾಪ್ನೋದಿತಿ ಜ್ಞಾನಿನಾಂ
ಸಾನ್ನಿಧ್ಯೇ ಕಿಮು ಕೇಶವಾನ್ಯಯಶಸಶ್ಶುಶ್ರೂಷವಸ್ಸ್ಯುಃ ಕ್ವಚಿತ್ ? ॥

ತಾ॥ ಕೇಳುವವರ ಕಿವಿಯನ್ನೆಲ್ಲಾ ದಹಿಸುವಂತಹ ಅತಿ ನಿಕೃಷ್ಟವಾದ ನಿಂದಾವಚನಗಳನ್ನೇ ಪ್ರಯೋಗಿಸಿ ನಿಂದಿಸುತ್ತಿರುವ ಪುರಾತನ ಶತ್ರುವಾದ ಶಿಶುಪಾಲನಿಗೂ ಕೂಡ ಸಾಯುಜ್ಯಮೋಕ್ಷವನ್ನು ತನ್ನ ಪಾದಗಳ ಸನ್ನಿಧಿಯಲ್ಲಿ ಅನುಗ್ರಹಿಸಿದ ಶ್ರೀಕೃಷ್ಣನ ಅತ್ಯದ್ಭುತವಾದ ಮಹಿಮೆಯನ್ನು ತಿಳಿದ ಜ್ಞಾನಾಧಿಕರಲ್ಲಿ ಆ ಕೇಶವನ ಮಾಹಾತ್ಮ್ಯವನ್ನು ಬಿಟ್ಟು ಇನ್ನು ಯಾವುದನ್ನಾದರೂ ಶ್ರೋತ್ರಗಳು ಕೇಳುವವೋ? (ಕೃಷ್ಣಾವತಾರದ ಚರಿತ್ರದ ಮುಂದೆ ರಾಮಾವತಾರ ಚರಿತ್ರವೂ ಕೂಡ ಶ್ರವಣಾರ್ಹವಲ್ಲವೆಂದು ಭಾವವು.)

(೪) ತನ್ಮೈಯಱಿಬವರ್ ತಾಮವರ್ಕ್ಕಾಳನ್ಱಿ ಯಾವರೋ,
ಪನ್ಮೈಪ್ಪಡರ್ಪೊರುಳಾದುಮಿಲ್ ಪಾೞ್ ನೆಡುಙ್ಕಾಲತ್ತು,
ನನ್ಮೈಪ್ಪುನಲ್ ಪಣ್ಣಿ ನಾನ್ಮುಕನೈಪ್ಪಣ್ಣಿ, ತನ್ನುಳ್ಳೇ
ತೊನ್ಮೈಮಯಕ್ಕಿಯ ತೋಱ್ಱಿಯ ಶೂೞಲ್‌ಕಳ್ ಶಿನ್ದಿತ್ತೇ.

ಪ್ರ॥ ಪನ್ಮೈ-ಅನೇಕವಿಧವಾದ ದೇವಾದಿ ಜಾತಿಭೇದಗಳುಳ್ಳ, ಪಡರ್-(ಪುಣ್ಯಪಾಪಾನುಗುಣವಾಗಿ) ವಿಸ್ತೀರ್ಣವಾದ, ಪೊರುಳ್-ವಸ್ತುಗಳೆಲ್ಲಾ, ಆದುಮ್ ಇಲ್-ಒಂದೂ ಇಲ್ಲದಂತೆ, ಪಾೞ್-ಶೂನ್ಯವಾಗಿದ್ದ, ನೆಡುಙ್ಕಾಲತ್ತು-(ದ್ವಿಪರಾರ್ಧರೂಪವಾದ) ಅತಿದೀರ್ಘಕಾಲದ ಅವಸಾನದಲ್ಲಿ, ನನ್ಮೈ-(ಭೂತಾನ್ತರ ಸಂಸ್ಪೃಷ್ಟವಾಗಿ ಕಾರ್ಯೋತ್ಪತ್ತಿಹೇತುವಾದ) ಸದ್ಗುಣವುಳ್ಳ, ಪುನಲ್-ಕಾರಣ ಜಲವನ್ನು, ಪಣ್ಣಿ-ಸೃಷ್ಟಿಸಿ, (ಆ ಜಲದಲ್ಲಿ ಉತ್ಪನ್ನವಾದ ಅಣ್ಡದಲ್ಲಿ) ನಾನ್ಮುಕನೈ-ಚತುರ್ಮುಖನಾದ ಬ್ರಹ್ಮನನ್ನು, ಪಣ್ಣಿ-ಸೃಷ್ಟಿಸಿ ಇಟ್ಟು, (ಈ ಸಮಷ್ಟಿ ಸೃಷ್ಟಿಯನ್ನು ತಾನೇ ಮಾಡಿದಮೇಲೆ) ತೊನ್ಮೈ-ಪೂರ್ವವಾಸನೆಯು ಹೋಗುವಂತೆ, ತನ್ನುಳ್ಳೇ-ತನ್ನ ಸ್ವರೂಪದ ಏಕದೇಶದಲ್ಲಿ, ಮಯಕ್ಕಿಯ-ಅಡಗಿ ಹೋಗಿದ್ದ ಸಮಸ್ತ ಪದಾರ್ಥಗಳನ್ನೂ, ತೋಱ್ಱಿಯ-ಸೃಷ್ಟಿಮಾಡಿ ತೋರಿಸಿದ, ಶೂೞಲ್‌ಕಳ್-ಅನೇಕ ವ್ಯಾಪಾರಗಳನ್ನು, ಶಿನ್ದಿತ್ತು-ಚಿನ್ತನೆಮಾಡಿ, ತನ್ಮೈ-ಅವನ ಮಹಿಮೆಯನ್ನು, ಅಱಿಬವರ್-ತಿಳಿಯುವವರು, ತಾಮ್-ತಾವುಗಳೆಲ್ಲಾ, ಅವರ್ಕ್ಕು ಅನ್ಱಿ-ಆ ಸ್ವಾಮಿಗೆ ಅಲ್ಲದೆ, ಆಳ್ ಆವರೋ-ಬೇರೆ ಯಾರಿಗಾದರೂ ದಾಸರಾಗುವರೋ ?

( ಸ-ಗಾ-ರ ॥ )—

ನಾನಾದೇವಮುಖಪ್ರಪಞ್ಚಸಂಘೇಃ ಪೂರ್ವಂ ಹಿ ಶೂನ್ಯಂ ಯದಾ
ಸರ್ವಂ ಜಾಸ್ತ ತದಾ ತು ಕಾರಣಜಲಾದಣ್ಡಂ ಸೃಜನ್ನೇವ ಯಃ ।
ತತ್ರಾಮುಂ ಚತುರಾನನಂ ಪುನರಪಿ ಸೃಷ್ಟ್ವಂ ನಿಯೋಜ್ಯಾಖಿಲಂ
ಧತ್ತೇ ಯೋಽಸ್ಯ ವಿಚಿನ್ತ್ಯ ದಿವ್ಯಚರಿತಂ ಕಿಂ ವಾಽನ್ಯದಾಸಾ ಬುಧಾಃ ?॥

ತಾ॥ ದೇವಾದಿ ಸಕಲ ಪದಾರ್ಥಗಳೂ ಶೂನ್ಯವಾಗಿ ಇದ್ದ ಕಾಲದಲ್ಲಿ ಕಾರಣ ಜಲವನ್ನು ಸೃಷ್ಟಿಸಿ, ಅದರೊಳು ಬ್ರಹ್ಮಾಣ್ಡವನ್ನು ಕಲ್ಪಿಸಿ, ಚತುರ್ಮುಖನನ್ನು ಅದಕ್ಕೆ ಅಧಿಪತಿಯನ್ನಾಗಿ ಮಾಡಿ ಇಟ್ಟು, ಅವನ ಮೂಲಕ ಪೂರ್ವದಲ್ಲಿ ತನ್ನಲ್ಲೇ ಅಡಗಿದ್ದ ಸಕಲ ಪದಾರ್ಥಗಳನ್ನೂ ಪುನಃ ಸೃಷ್ಟಿಮಾಡಿದ ಭಗವನ್ತನ ವಿಚಿತ್ರವಾದ ವ್ಯಾಪಾರಗಳನ್ನೆಲ್ಲಾ ಚಿನ್ತಿಸಿ, ಅವನ ಮಹಿಮೆಯನ್ನು ತಿಳಿಯುವವರು, ಅನ್ತಹ ಸ್ವಾಮಿಗೆ ಅಲ್ಲದೆ ಇನ್ನು ಯಾರಿಗಾದರೂ ದಾಸಭೂತರಾಗುವರೋ ?

(೫) ಶೂೞಲ್‌ಕಳ್ ಶಿನ್ದಿಕ್ಕಿಲ್ ಮಾಯನ್ ಕೞಲನ್ರಿ
ಚೂೞ್ವರೋ,
ಆೞ್ಪೆರುಮ್ಪುನಲ್ ತನ್ನುಳ್ಅೞುನ್ದಿಯ ಞಾಲತ್ತೈ,
ತಾೞ್ಪ್ಪಡಾಮಲ್ ತನ್‌ಪಾಲೊರು ಕೋಟ್ಟಿಡೈ
ತಾನ್‌ಕೊಣ್ಡ,
ಕೇೞಲ್ ತಿರುವುರುವಾಯಿಱ್ಱುಕ್ಕೇಟ್ಟುಮುಣರ್‌ನ್ದುಮೇ.

ಪ್ರ॥ ಪೆರುಮ್‌ಪುನಲ್‌ತನ್ನುಳ್ – ಅಪಾರವಾದ ಪ್ರಳಯಜಲದಲ್ಲಿ, ಆೞ-ಅಣ್ಡಕಪಾಲದವರೆಗೆ ಆಳವಾಗಿ ಕೆಳಗೆಹೋಗಿ, ಅೞುನ್ದಿಯ – ಮಗ್ನವಾಗಿರುವ, ಞಾಲತ್ತೈ-ಭೂಮಿಯನ್ನು, ತಾೞಪ್ಪಡಾಮಲ್-(ಕಾಲವಿಲಂಬದಿಂದ) ನಷ್ಟವಾಗದಂತೆ, ತನ್‌ಪಾಲ್ – ತನ್ನ ಶರೀರದ ಏಕದೇಶವಾದ, ಒರುಕೋಟ್ಟಿಡೈ – ಒಂದು ದಂಷ್ಟ್ರಾಗ್ರದಲ್ಲಿ, ತಾನ್-ತಾನಾಗಿಯೇ (ಸ್ವೇಚ್ಛೆಯಿಂದಲೇ), ಕೊಣ್ಡ-ಕೆಳಗಿಂದ ಎತ್ತಿ ಇಟ್ಟುಕೊಂಡ, ಕೇೞಲ್-ಶ್ರೀ ವರಾಹರೂಪವಾದ, ತಿರುವುರು-ರಮ್ಯವಾದ ಮೂರ್ತಿಯನ್ನು, ಆಯಿಱ್ಱು-ಧರಿಸಿದ ವೃತ್ತಾನ್ತವನ್ನು, ಕೇಟ್ಟುಮ್-(ವೇದೇತಿಹಾಸಪುರಾಣಾದಿಗಳಿಂದ) ಕೇಳಿಯೂ, ಉಣರ್‌ನ್ದುಮ್ – ಮನನಮಾಡಿಯೂ, ಶೂೞಲ್‌ಕಳ್-ಉಜ್ಜೀವನೋಪಾಯಗಳನ್ನು, ಶಿನ್ದಿಕ್ಕಿಲ್-ಹುಡುಕಿ ಚಿನ್ತಿಸಲು, ಮಾಯನ್-(ಪ್ರಳಯಕಾಲದ ಆಪತ್ತನ್ನು ಪರಿಹರಿಸಿ, ಸಂಸಾರಾರ್ಣವೋತ್ತಾರಕನಾದ) ಆಶ್ಚರ್ಯಕರನಾದ ವರಾಹಮೂರ್ತಿಯ, ಕೞಲ್ – ಪಾದಗಳನ್ನು, ಅನ್ಱಿ-ಬಿಟ್ಟು, ಶೂೞ್ವರೋ-ಇನ್ನು ಯಾವುದನ್ನಾದರೂ ಆಶ್ರಯಿಸುವರೋ?

(ಸ–ಗಾ–ರ ॥ )—

ಮಗ್ನಾಂ ತಾಂ ಪ್ರಳಯಾರ್ಣವೇ ತು ಪೃಥಿವೀಮುದ್ಧರ್ತುಮೇವಾಞ್ಜಸಾ
ದಂಷ್ಟ್ರಾಗ್ರೇಽತ್ರ ವರಾಹರೂಪಮಭಜದ್ಯಸ್ತಸ್ಯ ವೃತ್ತಂ ಶುಭಮ್ ।
ಆಕರ್ಣ್ಯಾಪ್ಯನುಚಿನ್ತ್ಯ ಸದ್ಗತಿಪರಾಃ ಕಿಂ ಚಿನ್ತಯನ್ತೋ ಜನಾ
ಮಾಯಿಶ್ರೀಚರಣಾಮ್ಬುಜಾತಯುಗಳಾದನ್ಯದ್ಭಜೇಯುಃ ಕ್ವಚಿತ್ ? ॥

ತಾ॥ ಅಪಾರವಾದ ಪ್ರಳಯಜಲದಲ್ಲಿ ಅಣ್ಡಕಪಾಲದವರೆಗೆ ಹೋಗಿ ಮುಳುಗಿ ಇರುವ ಭೂಮಿಯನ್ನು ಸ್ವಲ್ಪವೂ ನಷ್ಟವಾಗದಂತೆ ತನ್ನ ದಂಷ್ಟ್ರಾಗ್ರದಿಂದ ಸ್ವೇಚ್ಛೆಯಿಂದಲೇ ಎತ್ತಿ ಇಟ್ಟುಕೊಂಡ ಶ್ರೀ ವರಾಹಮೂರ್ತಿಯ ವೃತ್ತಾನ್ತವನ್ನು ಕೇಳಿಯೂ, ಧ್ಯಾನಮಾಡಿಯೂ, ತಮ್ಮ ಉಜ್ಜೀವನೋಪಾಯಗಳನ್ನು ಹುಡುಕುವವರು ಆಶ್ಚರ್ಯಕರವಾದ ಆ ವರಾಹಮೂರ್ತಿಯ ಪಾದಗಳನ್ನು ಬಿಟ್ಟು ಬೇರೆ ಯಾವುದನ್ನಾದರೂ ಆಶ್ರಯಿಸುವರೋ?

(೬) ಕೇಟ್ಟುಮುಣರ್ನ್ದವರ್ ಕೇಶವರ್ಕಾಳನ್ರಿ ಯಾವರೋ,
ವಾಟ್ಟಮಿಲಾವಣ್ಕೈ ಮಾವಲಿ ವಾದಿಕ್ಕ ವಾದಿಪ್ಪುಣ್ಡು,
ಈಟ್ಟಙ್ಗೊಳ್ ತೇವರ್ಗಳ್ ಶೆನ್ರಿರನ್ದಾರ್ಕ್ಕಿಡರ್ ನೀಕ್ಕಿಯ,
ಕೋಟ್ಟಙ್ಕೈ ವಾಮನನಾಯ್ ಚ್ಚೆಯ್ದ
ಕೂತ್ತುಕ್ಕಳ್ ಕಣ್ಡುಮೇ.

ಪ್ರ|| ವಾಟ್ಟಮಿಲಾ - ಯಾವಾಗಲೂ ಶುಷ್ಕವಾಗದ (ಅಸಂಕುಚಿತವಾದ), ವಣ್ಕೈ-ಉದಾರಹಸ್ತವುಳ್ಳ, ಮಾವಲಿ-ಮಹಾಬಲಿಯು, ವಾದಿಕ್ಕ - ತನ್ನ ಗರ್ವದಿಂದ ಬಾಧಿಸಲು, ವಾದಿಪ್ಪುಣ್ಡು-ಆ ಬಾಧೆಯನ್ನು ಅನುಭವಿಸಿ, ಈಟ್ಟಙ್ಗೊಳ್-ಪರಸ್ಪರ ಸಂಘೀಭೂತರಾದ, ತೇವರ್ಗಳ್-ದೇವತೆಗಳು, ಶೆನ್ರು-ಹೋಗಿ, ಇರನ್ದಾರ್ಕ್ಕು-ಪ್ರಾರ್ಥಿಸಿದ ಶರಣಾಗತರಿಗೆ, ಇಡರ್ನೀಕ್ಕಿಯ-ಮನೋದುಃಖನಿವರ್ತಕನಾದ, ಕೋಟ್ಟಙ್ಕೈ-ಯಾಚ್ಞಾವೃತ್ತಿಯಿಂದ ನೀಡಿದ ರಮ್ಯವಾದ ಹಸ್ತವುಳ್ಳ, ವಾಮನನಾಯ್- ವಾಮನರೂಪಿಯಾಗಿ, ಶೆಯ್ದ - (ಅವನ ಮನಸ್ಸನ್ನು ತನ್ನ ಮಾತಿನಿಂದ ಮರುಳುಮಾಡಿ, ತ್ರಿವಿಕ್ರಮನಾಗಿ ಬೆಳೆದು) ಮಾಡಿದ, ಕೂತ್ತುಕ್ಕಳ್-ನಾಟ್ಯಗಳನ್ನು, ಕಣ್ಡುಮ್-ಸಾಕ್ಷಾತ್ತಾಗಿ ನೋಡಿದಂತೆ ಧ್ಯಾನಮಾಡಿಯೂ, ಕೇಟ್ಟುಮ್ - (ಪುರಾಣಾದಿ ಶ್ರವಣದಿಂದ) ಕೇಳಿಯೂ, ಉಣರ್ನ್ದವರ್ - ತಿಳಿದವರು, ಕೇಶವರ್ಕು - ಪ್ರಶಸ್ತಕೇಶನಾದ ಆ ವಾಮನಮೂರ್ತಿಗೆ, ಅನ್ರಿ - ಅಲ್ಲದೆ, ಆಳ್ ಆವರೋ-ಬೇರೆಯಾರಿಗಾದರೂ ದಾಸಭೂತರಾಗುವರೋ ?

(ಸ-ಗಾ-ರ || )—

ನಿತ್ಯಾಸಙ್ಕುಚಿತಾತ್ಯುದಾರಕರ ಏವಾಸೀದ್ಬಲಿರ್ಯೋ ಮಹಾನ್
ದೃಪ್ತಸ್ತೇನ ಹಿ ಪೀಡಿತಾಸ್ಸುರಗಣಾಸ್ತೈರರ್ಥಿತೋಽಯಂ ಹರಿಃ |
ದುಃಖಧ್ವಂಸ್ಯಭವತ್ತು ವಾಮನವಪುಸ್ತಸ್ಯಾದ್ಭುತಂ ನಾಟಕಂ
ದೃಷ್ಟ್ವಾಽಽಕರ್ಣ್ಯ ವಿಚಿನ್ತ್ಯ ಯಾನ್ತಿ ಶರಣಂ ಕಿಂ ಕೇಶವಾದನ್ಯಽಪರಮ್||

ತಾ|| ಅಸಂಕುಚಿತವಾದ ಔದಾರ್ಯವುಳ್ಳ ಮಹಾಬಲಿಯು ಗರ್ವದಿಂದ ದೇವತೆಗಳನ್ನು ಬಾಧಿಸಲು, ಪರಸ್ಪರ ಸಂಘೀಭೂತರಾದ ದೇವತೆಗಳೆಲ್ಲರೂ ಭಗವಂತನ ಸಾನ್ನಿಧ್ಯಕ್ಕೆ ಹೋಗಿ ಶರಣಾಗತರಾಗಿ ಪ್ರಾರ್ಥಿಸಲು, ಅವರಿಗೆ ಅಭಯವನ್ನಿತ್ತು ರಮ್ಯಹಸ್ತನಾಗಿ ಯಾಚ್ಞಾವೃತ್ತಿಯಂ ಮಾಡಿ ಬಲಿಯನ್ನು ವಂಚಿಸಿದ ಶ್ರೀ ವಾಮನಮೂರ್ತಿಯು ಮಾಡಿದ ನಾಟ್ಯವ್ಯಾಪಾರಗಳನ್ನು ಚಿನ್ತಿಸಿ ಕೇಳಿದ ಪ್ರಾಜ್ಞರು ಕೇಶವಾತ್ಮಕನಾದ ಆ ವಾಮನಮೂರ್ತಿಯನ್ನು ಹೊರತು ಇನ್ನು ಯಾರಿಗಾದರೂ ದಾಸರಾಗುವರೋ ?

(೭) ಕಣ್ಡುಮ್ ತೆಳಿನ್ದುಮ್ ಕಱ್ಱಾರ್ ಕಣ್ಣರ್ಕಾಳನ್ಱಿ
ಯಾವರೋ,
ವಣ್ಡುಣ್ ಮಲರ್ ತ್ತೊಙ್ಗಲ್ ಮಾರ್ಕ್ಕಣ್ಡೇಯನುಕ್ಕು
ವಾೞ್ನಾಳ್,
ಇಣ್ಡೈಚ್ಚಡೈಮುಡಿ ಯೀಶನುಡನ್ ಕೊಣ್ಡುಶಾಚ್ಚೆಲ್ಲ,
ಕೊಣ್ಡಙ್ಗು ತನ್ನೊಡುಮ್ ಕೊಣ್ಡುಡನ್
ಶೆನ್ಱದುಣರ್ನ್ದುಮೇ

ಪ್ರ|| ವಣ್ಡು-ಭ್ರಮರಗಳು, ಉಣ್-ಮಧುಪಾನಮಾಡುವ, ಮಲರ್-ಪುಷ್ಪಗಳುಳ್ಳ, ತೊಙ್ಗಲ್-ಮಾಲೆಯನ್ನು ಧರಿಸಿರುವ, ಮಾರ್ಕ್ಕಣ್ಡೇಯನುಕ್ಕು-(ಯೌವನದಲ್ಲಿರುವ) ಮಾರ್ಕಣ್ಡೇಯಮುನಿಗೆ, ವಾೞ್ನಾಳ್-ಉಜ್ಜೀವನ ಕಾಲವನ್ನು, ಇಣ್ಡೈ-ಮಾಲೆಯನ್ನೂ, ಶಡೈಮುಡಿ-ಜಟಾಮಕುಟವನ್ನೂ ಧರಿಸಿರುವ, ಈಶನ್-ರುದ್ರನು, ಉಡನ್‌ಕೊಣ್ಡು-(ಆಶ್ರಿತನಾದ ಅವನನ್ನೂ) ತನ್ನೊಡನೆ ಕರೆದುಕೊಂಡು ಹೋಗಿ, ಉಶಾಚ್ಚೆಲ್ಲ - ಸ್ತೋತ್ರಮಾಡಲು, ಅಙ್ಗು-ಅಲ್ಲಿ, ಕೊಣ್ಡು - ಅವನನ್ನು ರಕ್ಷಿಸಬೇಕೆಂದು ಉದ್ದೇಶಿಸಿ, ತನ್ನೊಡುಮ್ ಕೊಣ್ಡು - (ದೇವತಾನ್ತರ ಸಮ್ಬನ್ಧವನ್ನು ಪರಿಹರಿಸಿ) ತನ್ನೊಡನೆ ಸೇರಿಸಿಕೊಂಡು, ಉಡನ್-ಯಾವಾಗಲೂ ತನ್ನಲ್ಲಿರುವಂತೆ, ಶೆನ್ಱದು-ನಡೆದ ಪ್ರಕಾರವನ್ನು, ಉಣರ್ನ್ದುಮೇ-ತಿಳಿದೂ, ಕಣ್ಡುಮ್-ಇವನ ಸರ್ವೋತ್ಕೃಷ್ಟತೆಯನ್ನು ಸಾಕ್ಷಾತ್ಕರಿಸಿಯೂ, ತೆಳಿನ್ದುಮ್-ವಿಶದವಾಗಿ ಪರಿಶೀಲಿಸಿಯೂ, ಕಱ್ಱಾರ್-ದಿವ್ಯಜ್ಞಾನವನ್ನು ಪಡೆದವರು, ಕಣ್ಣರ್ಕು-ಆನನ್ದ ಜನಕನಾದ ಸರ್ವೇಶ್ವರನಿಗೆ, ಅನ್ಱಿ -ಹೊರತು, ಆಳ್ ಆವರೋ-(ಬೇರೆ ಯಾರಿಗಾದರೂ) ದಾಸಭೂತರಾಗುವರೋ ?

( ಸ-ಗಾ-ರ || )—

ಮಾರ್ಕಣ್ಡೇಯಮಸೌ ಜಟಾಮುಕುಟಭೃದ್ರುದ್ರಸ್ಸ್ವಯಂ ಪಾಲಯಾ-
ಮ್ಯೇವೇತ್ಯುಕ್ತಿವರಪ್ರದಸ್ತ ಸಹಸಾ ತೇನಾಗತಶ್ಚಾಚ್ಯುತಮ್ |
ಸಮ್ಪ್ರಾರ್ಥ್ಯಾಭಜದಿಷ್ಟಸಿದ್ಧಿಮಿತಿ ಸಞ್ಜ್ಞಾನಾನ್ಯಪಿ ದೃಷ್ಟ್ವೈವ ಚ ಯೇ
ಜ್ಞಾತಾರಃ ಕಿಮಮೀ ಭವನ್ತಿ ವಿಭುಧಾಃ ಕೃಷ್ಣಂ ವಿನಾಽನ್ಯಂ ಶ್ರಿತಾಃ?||

ತಾ|| ಮಾರ್ಕಣ್ಡೇಯನನ್ನು ರಕ್ಷಿಸುತ್ತೇನೆಂದು ಹೇಳಿ ಪ್ರತಿಜ್ಞೆಮಾಡಿ, ಅವನೊಡನೆ ಬಂದ ಜಟಾಮಕುಟಧರನಾದ ರುದ್ರನು ತನ್ನನ್ನು ಸ್ತೋತ್ರಮಾಡಲು,

ಭಗವನ್ತನು ಆವನನ್ನು ತನ್ನೊಡನೆ ಸೇರಿಸಿಕೊಂಡು ರಕ್ಷಿಸಿದ ಪ್ರಕಾರವನ್ನು ಕೇಳಿ ತಿಳಿದು ಪರಿಶೀಲಿಸಿದ ಪ್ರಾಜ್ಞರು ಆ ಶ್ರೀಕೃಷ್ಣನನ್ನು ಬಿಟ್ಟು ಇನ್ನು ಯಾರಿಗಾದರೂ ದಾಸರಾಗುವರೋ ?

(೮) ತೆಳ್ಳಿವುಣರ್ನ್ದವರ್ ತೆಳ್ಳಿಯಾನ್ ಶೀರನ್ಱಿ ಕ್ಕಱ್ಪರೋ,
ಎಲ್ಲೈಯಿಲಾದ ಪೆರುನ್ತವತ್ತಾಲ್ ಪಲಶೆಯ್ ಮಿಱೈ,
ಅಲ್ಲಲಮರರೈ ಚ್ಚೆಯ್ಯುಮಿರಣಿಯನಾಕತ್ತೈ,
ಮಲ್ಲಲರಿಯುರುವಾಯ್ ಚ್ಚೆಯ್ದ ಮಾಯಮಱಿನ್ದುಮೇ.

ಪ್ರ॥ ಎಲ್ಲೈಯಿಲಾದ-ಅಪಾರವಾದ, ಪೆರುಮ್ ತವತ್ತಾಲ್-ಮಹಾತಪಸ್ಸಿನಿಂದ, ಪಲಶೆಯ್-ಅನೇಕವಿಧವಾಗಿ ಮಾಡಲ್ಪಟ್ಟ, ಮಿಱೈ-ಲೋಕಪೀಡೆಯುಳ್ಳ, ಅಮರರೈ - ದೇವತೆಗಳನ್ನೂ, ಅಲ್ಲಲ್ - ಮಹಾ ಕ್ಲೇಶವನ್ನು ಹೊಂದುವಂತೆ, ಶೆಯ್ಯುಮ್-ಮಾಡುವ, ಇರಣಿಯನ್-ಹಿರಣ್ಯಾಸುರನ, ಆಕತ್ತೈ-ಶರೀರವನ್ನು, ಮಲ್ಲಲ್-ಮಹಾವಿಷ್ಣುವೆಂಬ ಮಾಹಾತ್ಮ್ಯವುಳ್ಳ, ಅರಿಯುರುವಾಯ್-ನರಸಿಂಹರೂಪವನ್ನು ಧರಿಸಿದವನಾಗಿ, ಶೆಯ್ದ-(ಅನಾಯಾಸದಿಂದ) ಸೀಳಿಮಾಡಿದ, ಮಾಯಮ್-ಆಶ್ಚರ್ಯಚೇಷ್ಟಿತವನ್ನು, ಅಱಿನ್ದುಮೇ-ತಿಳಿದೂ, ತೆಳ್ಳಿ-ಸಮಗ್ರವಾಗಿ ಪ್ರವೇಶಿಸಿ ಪರಿಶೀಲಿಸಿ, ಉಣರ್ನ್ದವರ್-ಪ್ರಾಜ್ಞರಾದವರು, ತೆಳ್ಳಿಯಾನ್-ಆ ನರಸಿಂಹಮೂರ್ತಿಯಾದ ಶ್ರೀಮನ್ಮಹಾವಿಷ್ಣುವಿನ, ಶೀರ್-ವೀರಚರಿತ ಶ್ರೀಕೀರ್ತಿಯನ್ನು, ಅನ್ಱಿ-ಬಿಟ್ಟು, ಕಱ್ಪರೋ-ಬೇರೆ ಯಾವುದನ್ನಾದರೂ ಪರಿಶೀಲಿಸುವರೋ ?

( ಸ-ಗಾ-ರ ॥ )—

ನಿಸ್ಸೀಮಾತ್ಮತಪೋಬಲಾತ್ಸುರಗಣಾನ್ ಸಮ್ಪೀಡಯನ್ತಂ ಖಲಂ
ದೈತ್ಯಂ ತಂ ಚ ಹಿರಣ್ಯಮದ್ಭುತತನುಶ್ಶ್ರೀನಾರಸಿಂಹೋ ಹರಿಃ ।
ಕ್ಷಿಪ್ರಂ ಹನ್ತಿ ವಿದೀರ್ಯ ಮಾಯಚರಿತೋಽಭೂದೇತದಾಕರ್ಣ್ಯ ಚ
ಜ್ಞಾತಾರೋ ಯದಿ ಶೃಣ್ವತೇ ಕಿಮು ಬುಧಾಶ್ಶ್ರೀಶಸ್ಯ ವೃತ್ತಾನ್ತ್ಪರಮ್?॥

ತಾ॥ ಅಪಾರವಾದ ತಪೋಬಲದಿಂದ ದೇವತೆಗಳಿಗೂ ಅನೇಕವಿಧವಾಗಿ ಪೀಡೆಯನ್ನುಂಟುಮಾಡಿದ ಹಿರಣ್ಯಾಸುರನ ಶರೀರವನ್ನು ಶ್ರೀ ಮಹಾವಿಷ್ಣುವಾದ ಭಗವನ್ತನು ಸೀಳಿ ನರಸಿಂಹವೇಷದಿಂದ ಮಾಡಿದ ಅತ್ಯದ್ಭುತ ಚೇಷ್ಟಿತವನ್ನು ತಿಳಿದು ಚೆನ್ನಾಗಿ ಪರಿಶೀಲಿಸಿದ ಪ್ರಾಜ್ಞರು, ಆ ನರಸಿಂಹಮೂರ್ತಿಯ ವೀರಶ್ರೀ ಕೀರ್ತಿಯನ್ನು ಹೊರತು ಇನ್ನು ಯಾವುದನ್ನಾದರೂ ಸ್ಮರಿಸಿ ಅನುಸನ್ಧಾನ ಮಾಡುವರೋ ?

(೯) ಮಾಯಮಱಿಬವರ್ ಮಾಯವಱ್ಕಾಳನ್ಱಿ ಯಾವರೋ,
ತಾಯಮ್ ಶೆಱುಮ್ ಒರು ನೂಱ್ಱುವರ್ ಮಙ್ಗ
ಓರೈವರ್ಕ್ಕಾಯ್,
ತೇಶಮಱಿಯ ಓರ್ ಶಾರತಿಯಾಯ್ಚ್ಚೆನ್ಱು, ಶೇನೈಯೈ
ನಾಶಮ್ ಶೆಯ್ದಿಟ್ಟು ನಡನ್ದ ನಲ್ವಾರ್ತ್ತೈ ಯಱಿನ್ದುಮೇ.

ಪ್ರ॥ ತಾಯಮ್ – ದಾಯಪ್ರಾಪ್ತವಾದ (ಪಾಣ್ಡವರ) ರಾಜ್ಯಾಂಶವನ್ನು, ಶೆಱುಮ್–ಅಪಹರಿಸಿ ತೆಗೆದುಕೊಂಡ, ಒರು–ಅದ್ವಿತೀಯರಾದ (ನೈರ್ಘೃಣ್ಯಮಾತ್ಸರ್ಯಾದಿಗಳಲ್ಲಿ ಅಸದೃಶರಾದ), ನೂಱ್ಱುವರ್–ನೂರುಮಂದಿ ಕೌರವರು, ಮಙ್ಗ–ನಾಶಹೊಂದುವಂತೆ, ಓರೈವರ್ಕ್ಕಾಯ್ – ವಿಲಕ್ಷಣರಾದ ಪಾಣ್ಡವರಿಗೆ ತಾನೇ ಸರ್ವವಿಧಬನ್ಧುವಾಗಿ, ತೇಶಮಱಿಯ – ದೇಶಕ್ಕೆಲ್ಲಾ ತಿಳಿಯುವಂತೆ (ಎರಡು ಸೈನ್ಯಗಳ ಮಧ್ಯದಲ್ಲಿ), ಓರ್ ಶಾರತಿಯಾಯ್ – ಅದ್ವಿತೀಯನಾದ ಸಾರಥಿಯಾಗಿ, ಶೆನ್ಱು–ಸಂಚರಿಸಿ, ಶೇನೈಯೈ–ಸಕಲಸೈನ್ಯಗಳನ್ನೂ, ನಾಶಮ್ ಶೆಯ್ದಿಟ್ಟು–ನಾಶಪಡಿಸಿ, ನಡನ್ದ – (ಭೂಭಾರಾವತರಣಕಾರ್ಯ ಪೂರ್ತಿಯಾದಮೇಲೆ) ಸ್ವಸ್ಥಾನಕ್ಕೆ ಪ್ರಯಾಣಮಾಡಿದ, ನಲ್ವಾರ್ತ್ತೈ–(ಭಗವನ್ತನ) ಒಳ್ಳೆಯ (ಮಹಾಭಾರತ) ಚರಿತ್ರವನ್ನು, ಅಱಿನ್ದುಮೇ ತಿಳಿದೂ, ಮಾಯಮ್ – ಆಶ್ರಿತರಿಗೆ ವಶ್ಯನಾಗುವ ಆಶ್ಚರ್ಯವನ್ನು, ಅಱಿಬವರ್–ಪರಿಶೀಲಿಸುವವರು, ಮಾಯವಱ್ಕು–ಅನ್ತಹ ಮಾಯಾಚೇಷ್ಟಿತನಾದ (ಶ್ರೀಕೃಷ್ಣ) ಸ್ವಾಮಿಗೆ, ಅನ್ಱಿ–ಹೊರತು, ಆಳ್ ಆವರೋ – ಬೇರೆ ಯಾರಿಗಾದರೂ ದಾಸಭೂತರಾಗುವರೋ?

( ಸ–ಗಾ–ರ ॥ )—
ದಾಯಾಂಶಂ ಸರ್ವಮಪಿ ಸ್ವಯಂ ಕಿಲ ಬಲಾದಾಕೃಷ್ಯ ತೇ ಕೌರವಾ–
ಸ್ಸರ್ವೇ ಚಾಪಿ ವಿನಾಶಿತಾಶ್ಚ ಹರಿಣಾ ಪಾಣ್ಡ್ವಾಶ್ರಿತಾರ್ಥಂ ಧ್ರುವಮ್ ।
ಸಾರಥ್ಯಂ ವಹತಾ ಚಮೂಂ ಚ ಸಕಲಾಂ ಹತ್ವಾ ಪ್ರಯಾತೇತಿ ತ–
ದ್ವೃತ್ತಂ ಯೇ ತು ವಿದುರ್ಬುಧಾಃ ಕಿಮು ಹರೇಸ್ತೇ
ಮಾಯಿನೋಽನ್ಯಂ ಶ್ರಿತಾಃ ? ॥

ತಾ॥ ದಾಯಪ್ರಾಪ್ತವಾದ ರಾಜ್ಯಾಂಶವನ್ನು ಅಪಹರಿಸಿ ಮೂರ್ಖರಾಗಿದ್ದ ನೂರುಮಂದಿ ಕೌರವರು ನಾಶಹೊಂದುವಂತೆ ಪಾಣ್ಡವರಿಗೆ ಸರ್ವವಿಧಬನ್ಧುವಾಗಿ ಲೋಕಪ್ರಸಿದ್ಧನಾದ ಸಾರಥಿಯಾಗಿ ನಿಂತು ಸಂಚರಿಸಿ ಸಕಲಸೈನ್ಯನಾಶವಂ ಮಾಡಿ, ಸ್ವಸ್ಥಾನಕ್ಕೆ ಪ್ರಯಾಣಮಾಡಿದ ಭಗವನ್ತನ ಆಶ್ಚರ್ಯಕರವಾದ ಚರಿತ್ರವನ್ನು ತಿಳಿದ ಪ್ರಾಜ್ಞರು ಅನ್ತಹ ಸ್ವಾಮಿಗೆ ಅಲ್ಲದೆ ಬೇರೆ ಯಾರಿಗೆ ದಾಸರಾಗುವರು ?

(೧೦) ವಾಱ್ಱ್ರಯುಱಿಬವರ್ ಮಾಯವಱ್ಕಾಳ್ಱಿ ಯಾವರೋ
ಪೋರ್‌ತ್ತಪಿಱಪ್ಪೊಡು ನೋಯೊಡು ಮೂಪ್ಪೊಡಿಱಪ್ಪಿವ್ವೈ
ಪೇರ್‌ತ್ತು, ಪೆರುಮ್ ತುನ್ಬಮ್ ವೇರಱ ನೀಕ್ಕಿ
ತ್ತನ್‌ತಾಳಿನ್ ಕೀೞ್
ಚ್ಚೇರ್‌ತ್ತು, ಅವನ್‌ಶೆಯ್ಯುಮ್ ಶೇಮತ್ತೈ
ಯೆಣ್ಣಿ ತ್ತೆಳಿವುಱ್ಱೇ.

ಪ್ರ|| ವಾರ್‌ತ್ತೈ – (“ಮಾಮೇಕಂಶರಣಂವ್ರಜ”—ಎಂಬ) ಶುಭಸೂಕ್ತಿಯನ್ನು, ಅಱಿಬವರ್–ತಿಳಿಯುವವರು, ಪೋರ್‌ತ್ತ–ಪ್ರತಿಕೂಲವಾಗಿ ಅತ್ಯಂತ ದುಃಖಹೇತುವಾದ, ಪಿಱಪ್ಪೊಡು – ಜನ್ಮದಿಂದಲೂ, ನೋಯೊಡು – ವ್ಯಾಧಿಯಿಂದಲೂ, ಮೂಪ್ಪೊಡು – ವಾರ್ಧಕದಿಂದಲೂ, ಇಱಪ್ಪು – ಮರಣದಿಂದಲೂ ಕೂಡಿದ, ಇವ್ವೈ–ಈ ನಾನಾವಿಕಾರಗಳನ್ನು, ಪೇರ್‌ತ್ತು–ಪರಿಹರಿಸಿ ದಾಟುವಂತೆ ಮಾಡಿ, ಪೆರುಮ್‌ತುನ್ಬಮ್–ಅಪಾರವಾದ ಗರ್ಭನರಕ ಕ್ಲೇಶಗಳನ್ನೂ, ವೇರಱ–ಬೇರುಸಹಿತವಾಗಿ (ಅವುಗಳಿಗೆ ಮೂಲವಾದ ಕರ್ಮವೂ ನಷ್ಟವಾಗುವಂತೆ), ನೀಕ್ಕಿ–ನಾಶಪಡಿಸಿ, ತನ್ ತಾಳಿನ್ ಕೀೞ್–ತನ್ನ ಪಾದಗಳ ಕೆಳಗೆ, ಶೇರ್‌ತ್ತು–ಸೇರಿಸಿಕೊಂಡು (ಆತ್ಮಾನುಭವರೂಪವಾದ ಕೈವಲ್ಯವೆಂಬ ದುರ್ಗತಿಯನ್ನು ಹೊಂದದಂತೆ ರಕ್ಷಿಸಿ), ಅವನ್ ಶೆಯ್ಯುಮ್ – ಆ ಕೃಪಾನಿಧಿಯಾದ ಸ್ವಾಮಿಯು ಮಾಡುವ, ಶೇಮತ್ತೈ–ರಕ್ಷೆಯನ್ನು, ಎಣ್ಣಿ–ಪರಿಶೀಲಿಸಿ, ತೆಳಿವುಱ್ಱು–ಪ್ರಾಜ್ಞರಾಗಿದ್ದು, ಮಾಯವಱ್ಕು ಅನ್ಱಿ–ಆ ಮಾಯಾಚೇಷ್ಟಿತನಿಗೆ ಹೊರತು, ಆಳ್ ಆವರೋ–ಬೇರೆ ಯಾರಿಗಾದರೂ ದಾಸರಾಗುವರೋ ?

( ಸ–ಗಾ–ರ || )—

ಅಜ್ಞಾನಾಶ್ರಯಜನ್ಮ–ರುಕ್ಕ್ಷತಿ–ಜರಾ–ಮೃತ್ಯಾದಿಭಿಶ್ಚಾಖಿಲಂ
ನಾನಾದುಃಖಹರಮ್ಪರಾಮಪಿ ಚ ನಿರ್ಮೂಲ್ಯ ಪ್ರಣಾಶ್ಯ ಸ್ವಯಮ್ |
ಭಕ್ತಾನ್ ಯಃ ಕುರುತೇ ಸ್ವಪಾದಕಮಲದ್ವಂದ್ವಾಶ್ರಿತಾನ್ ರಕ್ಷಿತಾನ್
ವೃತ್ತಂ ತಸ್ಯ ವಿಚಿನ್ತ್ಯ ಕಿನ್ನು ವಿಬುಧಾಸ್ಸ್ಯುರ್ಮಾಯಿನೋಽನ್ಯಂ
ಶ್ರಿತಾಃ? ||

ತಾ|| ಅಜ್ಞಾನದಿಂದ ಉಂಟಾಗುವ ಜನ್ಮ–ವ್ಯಾಧಿ–ಜರಾ–ಮರಣಾದಿಗಳಿಂದ ಕೂಡಿದ ನಾನಾವಿಕಾರಗಳನ್ನೂ ಪರಿಹರಿಸಿ, ಗರ್ಭನರಕಾದಿ ಕ್ಲೇಶಗಳನ್ನೂ ಸಮೂಲವಾಗಿ ನಾಶಪಡಿಸಿ, ತನ್ನ ಪಾದಾರವಿಂದಗಳ ಕೆಳಗೆ ಸೇರಿಸಿಕೊಂಡು,

ಆ ಕೃಪಾನಿಧಿಯಾದ ಸ್ವಾಮಿಯು (ಸರ್ವವಿಧ ಬನ್ಧುವಾಗಿ) ಮಾಡುವ ರಕ್ಷಣ ಕೃತ್ಯವನ್ನು ಪರಿಶೀಲಿಸಿ ತಿಳಿದ ಪ್ರಾಜ್ಞರು (ಅವನ ಚರಮಶ್ಲೋಕದ ವಚನವನ್ನು ತಿಳಿದ ಮಹಾತ್ಮರು)—ಆ ಮಾಯಾಚೇಷ್ಟಿತನನ್ನು ಹೊರತು ಇತರರಿಗೆ ದಾಸಭೂತ ರಾಗುವರೋ ?

(೧೧) ತೆಳಿವುಱ್ಱು ವೀವಿನ್ಱಿ ನಿನ್ಱವರ್ಕ್ಕಿನ್ಬಕ್ಕದಿಶೆಯ್ಯುಮ್,
ತೆಳಿವುಱ್ಱ ಕಣ್ಣನೈ ತ್ತೆನ್ ಕುರುಕೂರ್
ಚ್ಚಡಕೋಪನ್ ಶೊಲ್,
ತೆಳಿವುಱ್ಱ ವಾಯಿರತ್ತುಳ್ಳಿವೈಪತ್ತುಮ್ ವಲ್ಲಾರವರ್,
ತೆಳಿವುಱ್ಱ ಶಿನ್ದೈಯರ್ ಪಾಮರು ಮೂವುಲಕತ್ತುಳ್ಳೇ.

ಪ್ರ|| ತೆಳಿವು-(ಉಪಾಯವೂ ಉಪೇಯವೂ ಅವನೇಎಂಬ) ವಿಶದಜ್ಞಾನವನ್ನು, ಉಱ್ಱು-ಪಡೆದು, ವೀವು ಇನ್ಱಿ-(ಆ ಜ್ಞಾನಕ್ಕೆ) ವಿಚ್ಛೇದವಿಲ್ಲದಂತೆ, ನಿನ್ಱವರ್ಕ್ಕು-ಸ್ಥಿರಸ್ವರೂಪರಾಗಿ ನಿಂತವರಿಗೆ, ಇನ್ಬ - ನಿರತಿಶಯಾನನ್ದರೂಪವಾದ, ಕದಿ - ಪ್ರಾಪ್ಯಗತಿಯನ್ನು, ಶೆಯ್ಯುಮ್-ಸಮ್ಪಾದಿಸಿಕೊಡುವವನಾಗಿ, ತೆಳಿವುಱ್ಱ-ದಿವ್ಯ ಜ್ಞಾನದೊಡನೆ ಚೇತನರನ್ನು ರಕ್ಷಿಸುವವನಾದ, ಕಣ್ಣನೈ-ಶ್ರೀಕೃಷ್ಣನನ್ನು, ತೆನ್-ರಮಣೀಯವಾದ, ಕುರುಕೂರ್ - ಶ್ರೀ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್-ಶ್ರೀ ಶಠಾರಿಮುನಿವರ್ಯರು, ಶೊಲ್-ಸ್ತುತಿಸಿ ರಚಿಸಿದ, ತೆಳಿವುಱ್ಱ-ದಿವ್ಯಜ್ಞಾನವನ್ನುಂಟುಮಾಡುವ, ಆಯಿರತ್ತುಳ್ - ಸಹಸ್ರ ಪದ್ಯಮಾಲೆಯೊಳು, ಇವೈಪತ್ತುಮ್-ಈ ಹತ್ತು ಪದ್ಯಗಳನ್ನು, ವಲ್ಲಾರವರ್-ತಿಳಿದವರು, ಪಾ-ಜನ್ಮ ಸಮ್ಬನ್ಧವನ್ನು, ಮರು-ಉಳ್ಳ, ಮೂವುಲಕತ್ತುಳ್ಳೇ-ಮೂರುಲೋಕಗಳಲ್ಲಿ, ತೆಳಿವು ಉಱ್ಱ - ಶುದ್ಧಸತ್ತ್ವಕಾರ್ಯವಾದ ಜ್ಞಾನವೈಶದ್ಯವನ್ನು ಉಳ್ಳ, ಶಿನ್ದೈಯರ್-ಮನಸ್ಸುಳ್ಳವರಾಗುವರು.

( ಸ-೧೨-೮ || )

ನಿತ್ಯಂ ನಿರ್ಮಲಚೇತಸಸ್ತು ಪರಮಾನನ್ದಂ ಪದಂ ಪ್ರಾಪಯನ್
ಕೃಷ್ಣೋ ಭಾತಿ ಹಿ ನಿತ್ಯನಿರ್ಮಲಮತಿಸ್ತಂ ಶ್ರೀಶಠಾರಿರ್ಮುನಿಃ |
ಸ್ತೋತುಂ ಶ್ರೀಕುರುಕಾಪುರಪ್ರಭುರಸೌ ಸಾಹಸ್ರಮೇವಾತನೋ-
ತ್ತತ್ರೇದಂ ದಶಕಂ ವಿದುರ್ಯದಿ ಜಗತ್ತ್ರಯ್ಯಾಂ ವಿಶುದ್ಧಾಶಯಾಃ ||

ತಾ|| ಅವಿಚ್ಛಿನ್ನವಾದ ವಿಶದಜ್ಞಾನವುಳ್ಳವರಾಗಿ ನಿಂತವರಿಗೆ ನಿರತಿಶಯಾನನ್ದರೂಪವಾದ ಸದ್ಗತಿಯನ್ನು ಕೊಡುವ ದಿವ್ಯಜ್ಞಾನ ನಿಧಿಯಾದ ಶ್ರೀಕೃಷ್ಣನನ್ನು ಶ್ರೀ ಕುರುಕಾಪುರಿಯ ಶಠಾರಿಮುನಿಯು ಸ್ತೋತ್ರಮಾಡಲು ರಚಿಸಿದ (ದಿವ್ಯಜ್ಞಾನ ಜನಕವಾದ) ಸಹಸ್ರಪದ್ಯಮಾಲೆಯೊಳು, ಈ ಹತ್ತುಪದ್ಯಗಳನ್ನು ತಿಳಿದವರು ಜನ್ಮಸಮ್ಬನ್ಧವುಳ್ಳ ಈ ಮೂರುಲೋಕಗಳಲ್ಲೂ ವಿಶದಜ್ಞಾನದಿಂದ ಶುದ್ಧ ಸತ್ತ್ವಗುಣ ಭೂಯಿಷ್ಠವಾದ ಮನಸ್ಸುಳ್ಳವರಾಗುವರು.

( ದ್ರ-ಉ-ಸಂ || )—

ಆರ್ತ್ತ್ಯೈಕರಕ್ಷಣಪರಾನವತಾರಹೇತೂ-
ನನ್ಯಾದೃಶಾನ್ ಗುಣಗಣಾನಪಹಾಯ ಶೌರೇಃ ।
ಅನ್ಯತ್ ಕಥಾ ಮತಿಮತಾಮವಬೋಧನೀಯ-
ಮಿತ್ಯಾನ್ವಪದ್ಯಮಲುನಾದಧಿಪಞ್ಚಮಂ ಸಃ ||

( ದ್ರ-ಉ-ತಾ-ರ || )—

ಸಾಕೇತೇ ಮುಕ್ತಿದಾನಾತ್ ಸ್ಥಿರಚರಜನುಷಾಂ ಸರ್ವತೋ ರಕ್ಷಕತ್ವಾ-
ಚ್ಚೈದ್ಯೇ ಸಾಯುಜ್ಯದಾನಾಜ್ಜಗದುದಯಕೃತೇರುದ್ಧೃತೇರ್ಭೂಮಿದೇವ್ಯಾಃ ।
ಯಾಚ್ಞಾರ್ಥಂ ವಾಮನತ್ವಾಚ್ಛಿವಭಜಕಮುನೇರ್ಮೋಕ್ಷದಾನಾದ್ಯದನ್ಯೈಃ
ಸ್ನೇಹಂ ಸರ್ವಾಶ್ರಯಂ ಸ್ವಂ ಪ್ರಕಟಯತಿ ಹರಿಶ್ಚೇತ್ಯಥಾಜ್ಞಾಯಿ ತೇನ ||

( ಈ ಪಞ್ಚಮದಶಕದ ಸಾರಾಂಶ— )

ಈ ಐದನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಅವತಾರ ಚರಿತ್ರಗಳನ್ನು ಅನುಸನ್ಧಾನಮಾಡಿ, ಶ್ರೀರಾಮರೂಪಿಯಾಗಿಯೂ, ಶ್ರೀಕೃಷ್ಣರೂಪಿಯಾಗಿಯೂ, ಚತುರ್ಮುಖ ಜನಕನಾಗಿಯೂ, ವರಾಹಮೂರ್ತಿಯಾಗಿಯೂ, ವಾಮನರೂಪಿಯಾಗಿಯೂ, ಮಾರ್ಕಣ್ಡೇಯ ಪರಿಪಾಲಕನಾಗಿಯೂ, ನರಸಿಂಹಮೂರ್ತಿಯಾಗಿಯೂ, ಪಾರ್ಥಸಾರಥಿಯಾಗಿಯೂ, ಗೀತಾಚಾರ್ಯನಾಗಿಯೂ ಅವನು ಮಾಡಿದ ಅತ್ಯದ್ಭುತ ವ್ಯಾಪಾರಗಳನ್ನೆಲ್ಲಾ ವರ್ಣಿಸಿ, ಆಯಾ ಅವತಾರದ ಮಾಹಾತ್ಮ್ಯವನ್ನು ನೋಡಿದರೆ ಮತ್ತೊಬ್ಬರನ್ನು ಆಶ್ರಯಿಸಲು ಯಾರಿಗೆತಾನೇ ಮನಸ್ಸು ಉಂಟಾಗುವುದೆಂದು ಭಕ್ತರ ಅನನ್ಯಪರತ್ವವನ್ನು ನಿರ್ಣಯಿಸಿ—ಫಲಶ್ರುತಿಯನ್ನೂ ಹೇಳಿರುತ್ತಾರೆ.

ಶ್ರೀಃ

# ಸಪ್ತಮಶತಕದಲ್ಲಿ—ಷಷ್ಠದಶಕ.

## (ಪಾಮರುಮೂವುಲಕುಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಸಾಕ್ಷಾತ್ಕಾರವನ್ನು ಅಪೇಕ್ಷಿಸಿ, ಅಲಾಭಕ್ಲೇಶದಿಂದ ಮೊರೆಯಿಡುತ್ತ ಆಕ್ರನ್ದನವಂ ಮಾಡುತ್ತಾರೆ.)

---

(೧) ಪಾಮರು ಮೂವುಲಕುಮ್ ಪಡೈತ್ತ ಪಱ್ಪನಾಬಾವೋ,
ಪಾಮರು ಮೂವುಲಕುಮಳನ್ದ ಪಱ್ಪಪಾದಾವೋ,
ತಾಮರೈಕ್ಕಣ್ಣಾವೋ ತನಿಯೇನ್ ತನಿಯಾಳಾವೋ,
ತಾಮರೈಕ್ಕೈಯಾವೋ ಉನ್ನೈ ಎನ್ಱುಕೊಲ್ ಶೇರ್ವದುವೇ.

ಪ್ರ॥ ಪಾಮರು-ವಿಸ್ತೀರ್ಣತೆಯನ್ನು ಪಡೆದಿರುವ, ಮೂವುಲಕುಮ್-ಮೂರು ಲೋಕಗಳನ್ನೂ, ಪಡೈತ್ತ - ಸೃಷ್ಟಿಸಿದ, ಪಱ್ಪನಾಬಾವೋ - ಪದ್ಮನಾಭನೇ!, ಪಾಮರುಮೂವುಲಕುಮ್ - ಅನ್ತಹ ಮೂರು ಲೋಕಗಳನ್ನೂ, ಅಳನ್ದ-ಅಳೆದ, ಪಱ್ಪಪಾದಾವೋ-ಪಾದಾರವಿನ್ದಗಳುಳ್ಳವನೇ!, ತಾಮರೈಕ್ಕಣ್ಣಾವೋ-ಪುಣ್ಡರೀಕಾಕ್ಷನೇ!, ತಾಮರೈಕ್ಕೈಯಾವೋ-ಪದ್ಮಸದೃಶಹಸ್ತನೇ!, ತನಿಯೇನ್-ಸಹಾಯರಹಿತನಾದ ನನ್ನ, ತನಿ-ಅದ್ವಿತೀಯನಾದ, ಆಳಾವೋ-ಪ್ರಭುವೇ!, ಉನ್ನೈ-ನಿನ್ನನ್ನು, ಎನ್ಱುಕೊಲ್-ಯಾವಾಗ, ಶೇರ್ವದು-(ನಾನು) ಸೇರುವುದು? (ಓ— ಎಂದು ಪದಗಳ ಕೊನೆಯಲ್ಲಿರುವುದು ಶ್ರೀ ಶಠಾರಿಮುನಿವರ್ಯರ ಮನಸ್ಸಿನ ಆರ್ತಿಯ ಅತಿಶಯವನ್ನು ತೋರಿಸುತ್ತದೆ.)

( ಸ-ಗಾ-ರ ॥ )—

ವಿಸ್ತೀರ್ಣಲೋಕತತಿಸೃಟ್ ಕಿಲ ಪದ್ಮನಾಭೋ
ವಿಸ್ತೀರ್ಣಲೋಕಮಿತಿಕೃತ್ ಕಿಲ ಪದ್ಮಪಾದಃ ।
ಪದ್ಮಾಮ್ಬಕೋಽಸಿ ನನು ಪದ್ಮಕರೋಽಸಿ ದೇವ !
ತ್ವಾಂ ಪಾಲಕಂ ತ್ವಶರಣೋಽತ್ರ ಕದಾ ಭಜೇಯಮ್? ॥

ತಾ|| ವಿಸ್ತೀರ್ಣವಾದ ಮೂರುಲೋಕಗಳನ್ನೂ ಸೃಷ್ಟಿಸಿದ ಪದ್ಮನಾಭನೇ !, ಅನ್ತಹ ಮೂರುಲೋಕಗಳನ್ನೂ ಅಳೆದ ಪದ್ಮಚರಣನೇ !, ಪುಣ್ಡರೀಕಾಕ್ಷನೇ !, ಪದ್ಮಸದೃಶಹಸ್ತನೇ !, ಸಹಾಯ:ರಹಿತನಾದ ನನಗೆ ಅನ್ಯಾದೃಶನಾದ (ಮಹೋಪಕಾರಕನಾದ) ಸ್ವಾಮಿಯೇ !, ನಿನ್ನನ್ನು ನಾನು ಸೇರುವುದು ಯಾವಾಗಲೋ— ಎಂದು ತಮ್ಮ ಪರಮಾರ್ತಿಯನ್ನು ಸೂಚಿಸಿರುತ್ತಾರೆ.

(೨) ಎನ್ರುಕೊಲ್ ಶೇರ್ವದನ್ದೋ ಅರನ್

ನಾನ್ಮುಕನೇತ್ತುಮ್, ಶೆಯ್ಯ
ನಿನ್ ತಿರುಪ್ಪಾದತ್ತೈ ಯಾನ್ ನಿಲನೀರೆರಿಕಾಲ್, ವಿಣ್ಣುಯಿರ್
ಎನ್ರಿವೈತಾನ್ ಮುದಲಾಯ್ ಮುಱ್ಱುಮಾಯ್
ನಿನ್ರವೆನ್ದಾಯೋ,
ಕುನ್ರೆಡುತ್ತಾನಿರೈಮೇಯ್ತ್ತವೈ ಕಾತ್ತ ವೆಮ್ಕೂತ್ತಾವೋ.

ಪ್ರ|| ನಿಲ-ಭೂಮಿ, ನೀರ್-ಜಲ, ಎರಿ-ಅಗ್ನಿ, ಕಾಲ್-ವಾಯು, ವಿಣ್-ಆಕಾಶ, ಉಯಿರ್ - ಪ್ರಾಣಿವರ್ಗವೂ, ಎನ್ರು-ಎಂಬ, ಇವೈತಾನ್-ಇವುಗಳೇ, ಮುದಲಾಯ್ - ಮೊದಲಾದ, ಮುಱ್ಱುಮಾಯ್ - ಸಮಸ್ತ ಪದಾರ್ಥಗಳೂ, ಆಯ್ ನಿನ್ರ-(ತನಗೆ ಶರೀರವೆಂಬಂತೆ) ಆಗಿ ನಿಂತ, ಎನ್ದಾಯೋ-ನನ್ನ ಸ್ವಾಮಿಯೇ, ಆನಿರೈ-ಪಶುಸಂಘಗಳನ್ನು, ಮೇಯ್ತ್ತು- ಮೇಯಿಸಿ, ಕುನ್ರು - ಪರ್ವತವನ್ನು, ಎಡುತ್ತು-ಎತ್ತಿ, ಅವೈ ಕಾತ್ತ-ಆ ಪಶುಸಂಘಗಳನ್ನು ರಕ್ಷಿಸಿದ, ಎಮ್ ಕೂತ್ತಾ- ನಮ್ಮ ಮನೋಹಾರಿ ಚೇಷ್ಟಿತನೇ !, ಅರನ್-ರುದ್ರನೂ, ನಾನ್ಮುಕನ್-ಚತುರ್ಮುಖನೂ, ಏತ್ತುಮ್ - ಸ್ತುತಿಸುವಂತಹ, ಶೆಯ್ಯ-ದರ್ಶನೀಯವಾದ, ನಿನ್-ನಿನ್ನ, ತಿರುಪ್ಪಾದತ್ತೈ-ಶ್ರೀ ಪಾದಗಳನ್ನು, ಯಾನ್ - ನಾನು, ಶೇರ್ವದು-ಸೇರುವುದು, ಎನ್ರುಕೊಲ್-ಎಂದಿಗೋ!, ಅನ್ದೋ--ಅಯ್ಯೋ !

( ಸ-ಗಾ-ರ || )—

ಪೃಥ್ವೀಜಲಾನಿಲಮರುದ್ಗಗನಾತ್ಮಮಾಲಾ
ಸರ್ವೇತರಾಽಪಿ ಚ ಪದಾರ್ಥತತಿಸ್ತ್ವಮಾಶಃ |
ಗೋಪಾಲಕಶ್ಚ ಗಿರಿಭೃತ್ಸುರವೇದ್ಯೋಽಪಿ ದೇವ್ಯೈ-
ಸ್ತ್ವನ್ನ್ಯಂ ತವಾಂಘ್ರಿಯುಗಳಂ ತು ಕದಾ ಭಜೇಯಮ್ ?||

ತಾ॥ ಪೃಥಿವ್ಯಪ್ತೇಜೋವಾಯ್ವಾಕಾಶಗಳೂ, ಸಕಲ ಪ್ರಾಣಿವರ್ಗಗಳೂ, ಇನ್ನೂ ಇತರ ಸಮಸ್ತ ಪದಾರ್ಥಗಳೂ ತಾನೇ ಎಂಬಂತೆ ಅವುಗಳಿಗೆ ಶರೀರಿಯಾಗಿ ನಿಂತ ಸ್ವಾಮಿಯೇ!, ಪಶುಸಂಘಗಳನ್ನು ಮೇಯಿಸಿ, ಪರ್ವತವನ್ನು ಎತ್ತಿ ಅವುಗಳನ್ನು ರಕ್ಷಿಸಿದ ನನ್ನ ಮನೋಹಾರಿ ಲೀಲಾಚೇಷ್ಟಿತನಾದ ಪರಮಾತ್ಮನೇ!, ರುದ್ರ ಚತುರ್ಮುಖಾದಿಗಳಿಂದ ಸ್ತುತಿಸಲ್ಪಟ್ಟ ನಿನ್ನ ರಮಣೀಯ ಚರಣಗಳನ್ನು ನಾನು ಸೇರುವುದು ಎಂದಿಗೋ!—ಅಯ್ಯೋ! (ಎಂದು ಕಾಲವಿಲಂಬವನ್ನು ಸಹಿಸಲಾರದೆ ಆರ್ತರಾಗುತ್ತಾರೆ.)

(೩) ಕಾತ್ತವೆಙ್ಕೋತ್ತಾಯ್ ಮಲೈಯೇನ್ದಿ ಕ್ಕಲ್ಮಾರಿತನ್ನೈ,
ಪೂತ್ತಣ್ತುೞಾಯ್‌ಮುಡಿಯಾಯ್
ಪುನೈಕೊನ್ಱೈಯಮ್ ಶೆಂಶಡೈಯಾಯ್,
ವಾಯ್ತ್ತವೆನ್ ನಾನ್ಮುಕನೇ ವನ್ದೆನ್ನಾರುಯಿರ್
ನೀಯಾನಾಲ್,
ಏತ್ತರುಮ್ ಕೀರ್ತ್ತಿಯಿನಾಯುನ್ನೈ
ಯೆಙ್ಙು ತ್ತಲೈಪ್ಪೆಯ್ವನೇ.

ಪ್ರ॥ ಮಲೈ-ಪರ್ವತವನ್ನು, ಏನ್ದಿ-ಎತ್ತಿ, ಕಲ್ಮಾರಿತನ್ನೈ-ಕಲ್ಲುಮಳೆಯನ್ನು (ಶಿಲಾವರ್ಷವನ್ನು), ಕಾತ್ತ – ತಡೆದ, ಎಮ್‌ಕೋತ್ತಾ – ನಮ್ಮ ಲೀಲಾವಿಲಾಸ ಚತುರನೇ!, ಪೂತ್ತಣ್ ತುೞಾಯ್-ವಿಕಸಿತವಾದ ಪುಷ್ಪಗಳಿಂದ ಕೂಡಿದ ಶೀತಳವಾದ ತುಳಸೀಮಾಲೆಯುಳ್ಳ, ಮುಡಿಯಾಯ್ – ಕಿರೀಟವನ್ನು ಧರಿಸಿರುವವನೇ!, ಪುನೈ-ಅಲಂಕೃತವಾದ, ಕೊನ್ಱೈ-ಕೊನ್ಱೈಯೆಂಬ (ಜಾತಿಯ) ಪುಷ್ಪಗಳ ಮಾಲೆಯನ್ನು ಧರಿಸಿರುವ, ಅಮ್-ರಮ್ಯವಾದ, ಶೆಂಶಡೈಯಾಯ್-ಕೆಂಪುಜಟೆಯುಳ್ಳ ರುದ್ರರೂಪಿಯಾಗಿರುವವನೇ (ರುದ್ರನಿಗೆ ಅನ್ತರ್ಯಾಮಿಯಾಗಿರುವವನೇ!), ವಾಯ್ತ್ತ-(ತನ್ನ ನಾಭಿಪದ್ಮದಲ್ಲಿ) ಉತ್ಪನ್ನನಾದ, ಎನ್ ನಾನ್ಮುಕನೇ-ನನ್ನ ಚತುರ್ಮುಖನೇ! (ಅವನಿಗೆ ಅನ್ತರ್ಯಾಮಿಯಾದವನೇ!), ಏತ್ತ-ಸುತ್ತಿಸಲು, ಅರುಮ್-ಅಶಕ್ಯವಾದ, ಕೀರ್ತ್ತಿಯಿನಾಯ್-ಕೀರ್ತ್ತಿಯುಳ್ಳವನೇ, ನೀವನ್ದು-ನೀನೇ ಬಂದು, ಎನ್ ಆರುಯಿರ್-ನನ್ನ ಪರಿಪೂರ್ಣಧಾರಕನಾಗಿ, ಆನಾಲ್-ಆದರೆ, ಉನ್ನೈ-(ಸರ್ವಾಧಿಕನಾಗಿ ಸರ್ವಸುಲಭನಾದ) ನಿನ್ನನ್ನು, ಎಙ್ಙು-ಎಲ್ಲಿ, ತಲೈಪ್ಪೆಯ್‌ವನೇ-ಆಶ್ರಯಿಸಿ ಅನುಭವಿಸುವೆನು?

( ಸ-ಗಾ-ರ ॥ )—

ಧೃತ್ವಾ ಗಿರಿಂ ತು ಪರಿಪಾಲಕ ! ಶೈಲವರ್ಷಾ-
ದಸ್ಮದ್ವಿಹಾರನಟನಸ್ತುಲಸೀಧರೋಽಸಿ |
ರುದ್ರಶ್ಚತುರ್ಮುಖ ಉಭೌ ತವ ಹಿ ಪ್ರಕಾರೌ
ಸ್ತೋತ್ರಪ್ರತೀಗಂ ಹೃದಿಭವಂ ಕ್ವ ಭಜೇ ಬತ! ತ್ವಾಮ್? ॥

ತಾ॥ ಪರ್ವತವನ್ನು ಎತ್ತಿ, ಕಲ್ಲುಮಳೆಯನ್ನು ತಡೆದ ನಮ್ಮ ಲೀಲಾವಿಲಾಸ ಚತುರನೇ! ದಿವ್ಯತುಳಸೀಮಾಲಾಲಂಕೃತ ಕಿರೀಟಧಾರಿಯೇ! ರುದ್ರಚತುರ್ಮುಖಾದ್ಯನ್ತರಾತ್ಮನೇ ! ಅಪಾರಕೀರ್ತಿ ಪರಿಪೂರ್ಣನೇ! ನೀನೇ ಬಂದು ನನಗೆ ಧಾರಕನಾಗಿ ಪ್ರಕಾಶಿಸುತ್ತಿರುವುದರಿಂದ, ಸರ್ವಾಧಿಕನಾಗಿಯೂ ಸರ್ವಸುಲಭನಾಗಿಯೂ ಇರುವ ನಿನ್ನನ್ನು ನಾನು ಎಲ್ಲಿ ಆಶ್ರಯಿಸಿ ಅನುಭವಿಸುವೆನು ?

(೪) ಎಙ್ಗಿತ್ತಲೈಪ್ಪೆಯರ್‌ವೆ ನಾನೆೞಿಲ್
ಮೂವುಲಕುಮ್ ನೀಯೇ,
ಅಙ್ಗುಯರ್ ಮುಕ್ಕಣ್‌ಪಿರಾ
ಪಿರಮಪೆರುಮಾನವ ನೀ,
ವೆಙ್ಕದಿರ್ ವಚ್ಚಿರಕ್ಕೈ ಯಿನ್ದಿರ ಮುದಲಾ
ತ್ತೆಯ್‌ವಮ್ ನೀ,
ಕೊಙ್ಗಲರ್ ತಣ್ಣನ್ದುೞಾಯ್‌ಮುಡಿ
ಯೆನ್ನುಡೈಕ್ಕೋವಲನೇ.

ಪ್ರ॥ ಕೊಙ್ಗು ಅಲರ್ – ಮಧುಭರಿತವಾಗಿ ವಿಕಸಿತವಾದ, ತಣ್ ಅಮ್ ತ್ತುೞಾಯ್–ಶೀತಳವಾಗಿ ರಮ್ಯವಾದ ತುಲಸೀಮಾಲೆಯುಳ್ಳ, ಮುಡಿ–ಕೇಶಪಾಶವುಳ್ಳವನೇ !, ಎನ್ನುಡೈ–ನನ್ನ, ಕೋವಲನೇ – ಗೋಪಾಲಕನೇ! (ಭವ್ಯನಾದ ಕೃಷ್ಣನೇ!), ಎೞಿಲ್–ರಮಣೀಯವಾದ, ಮೂವುಲಕುಮ್ – ಮೂರು ಲೋಕಗಳೂ, ನೀಯೇ–ನೀನೇ (ನೀನು ಇಟ್ಟಂತೆ ಇರುವುವು), ಅಙ್ಗು–ಅಲ್ಲಿ, ಉಯರ್–ಉನ್ನತಪದವಿಯಲ್ಲಿರುವ, ಮುಕ್ಕಣ್‌ಪಿರಾ – ತ್ರಿಲೋಚನನಾದ ರುದ್ರನೂ, ಪಿರಮಪೆರುಮಾನವ – ಬ್ರಹ್ಮದೇವನೆಂಬವನೂ, ನೀ–ನೀನೇ (ನೀನು ಇಟ್ಟಂತೆ ನಿನಗೆ ವಶ್ಯರಾದವರೇ), ವೆಮ್‌ಕದಿರ್ - ಉಷ್ಣರಶ್ಮಿಪ್ರಕಾಶವುಳ್ಳ (ಉಜ್ಜ್ವಲವಾದ), ವಚ್ಚಿರಮ್–ವಜ್ರಾಯುಧವನ್ನು, ಕೈ–ಹಸ್ತದಲ್ಲಿ ಧರಿಸಿರುವ, ಇನ್ದಿರ–ಇನ್ದ್ರನೇ, ಮುದಲ್ ಆ–ಮೊದಲಾದ, ತೆಯ್‌ವಮ್-ದೇವವರ್ಗವೂ, ನೀ–

ನೀನೇ!, (ಆದುದರಿಂದ) ನಾ೯—ಅಸಹಾಯನಾದ ನಾನು, ಎಙ್ಙ—ಎಲ್ಲಿ (ಹೇಗೆ), ತಲೈಪ್ಪೆಯ್‌ವ೯—(ನಿನ್ನನ್ನು) ಆಶ್ರಯಿಸುವೆನು ?

( ಸ-ಗಾ-ರ ॥ )—

ಗೋಪಾಲ! ದಿವ್ಯತುಲಸೀಧರ ಮೌಳಿದೀಪ!
ತ್ರೈಲೋಕ್ಯರೂಪ! ವಿಷಮಾಮ್ಬಕ! ಧಾತೃರೂಪ।
ಇನ್ದ್ರೋಽಸಿ ವಜ್ರಧರ! ದೇವಗಣೋಽಸಿ ಹಿ ತ್ವಾಂ
ಸರ್ವಸ್ಯ ಮೂಲಮಪಿ ಕುತ್ರ ಭಜಾಮ್ಯಹಂ ವಾ ॥

ತಾ॥ ದಿವ್ಯ ತುಲಸೀಮಾಲಾಲಂಕೃತ ಕೇಶಪಾಶನೇ! ನನ್ನ ಗೋಪಾಲಕನಾದ ಶ್ರೀಕೃಷ್ಣನೇ! ಸಕಲಲೋಕಗಳೂ ನಿನಗೇ ವಶ್ಯವಾಗಿ ಇವೆ. ಬ್ರಹ್ಮರುದ್ರೇನ್ದ್ರಾದಿ ದೇವತೆಗಳೂ ನೀನೇ ಎಂಬಂತೆ ನಿನಗೆ ಸರ್ವ ಪ್ರಕಾರಗಳಲ್ಲೂ ವಶ್ಯರಾಗಿರುತ್ತಾರೆ. ಆದುದರಿಂದ ನಾನು ನಿನ್ನನ್ನು ಎಲ್ಲಿ (ಹೇಗೆ) ಆಶ್ರಯಿಸುವೆನು ?

(೫) ಎನ್ನುಡೈ ಕ್ಕೋವಲನೇ ಯೆ೯ ಪೊಲ್ಲಾಕ್ಕರುಮಾಣಿಕ್ಕಮೇ,
ಉನ್ನುಡೈ ಯುನ್ದಿಮಲರುಲಕಮವ್ವೈ ಮೂನ್ರುಮ್ ಪರನ್ದು,
ಉನ್ನುಡೈ ಶ್ಚೋದಿವೆಳ್ಳತ್ತಕಮ್ಪಾಲುನ್ನೈ
ಕ್ಕಣ್ಡು ಕೊಣ್ಡಿಟ್ಟು,
ಎನ್ನುಡೈ ಯಾರುಯಿರಾರೆಙ್ಙನೇಕೊಲ್ ವನ್ದೆಯ್‌ದುವರೇ.

ಪ್ರ॥ ಎನ್ನುಡೈ—ನನ್ನ, ಕೋವಲನೇ—ಗೋಪಾಲಕನೇ!, ಪೊಲ್ಲಾ—ರನ್ಧ್ರವಿಲ್ಲದ (ಉಪಭುಕ್ತವಾಗದ=ನಿರ್ಮಲವಾದ), ಕರುಮಾಣಿಕ್ಕಮೇ—ನೀಲಮಣಿಯೇ!, ಉನ್ನುಡೈ—ನಿನ್ನ, ಉನ್ದಿ—ನಾಭಿಯಲ್ಲಿ, ಮಲರ್ — ವಿಕಸಿತವಾಗಿ ಉತ್ಪನ್ನವಾದ, ಉಲಕಮ್ ಅವ್ವೈಮೂನ್ರುಮ್—ಆ ಮೂರು ಲೋಕಗಳಲ್ಲೂ, ಪರನ್ದು — ವಿಸ್ತರಿಸಿ ವ್ಯಾಪಿಸಿ, ಎನ್ನುಡೈ—ನನ್ನ, ಆರ್ ಉಯಿರಾರ್—ಪೂರ್ಣವಾದ ಆತ್ಮಾ ಆದವರು, ಉನ್ನುಡೈ — ನಿನ್ನ, ಶೋದಿವೆಳ್ಳಮ್ - ತೇಜೋರಾಶಿರೂಪವಾದ ಪ್ರದೇಶದ, ಅಕಮ್‌ಪಾಲ್—ಒಳಗೆ, ಉನ್ನೈ—ನಿನ್ನನ್ನು, ಕಣ್ಡುಕೊಣ್ಡಿಟ್ಟು—ಕಂಡುಕೊಂಡು, ವನ್ದು ಎಯ್‌ದುವರ್—ಬಂದು ಹೊಂದುವುದು, ಎಙ್ಙನೇಕೊಲ್—ಹೇಗೆ ?

( ಸ-ಗಾ-ರ ॥ )—

ಗೋಪಾಲ! ನೀಲಮಣಿರೂಪ! ಮಣಿಮಾಚ್ಯುತ! ತ್ವ-
ನ್ನಾಭೀಸರೋಜಭವಲೋಕತತಿಂ ವಿಲೋಕ್ಯ ।
ಆತ್ಮಾ ಹೃದೀಹ ಮಮ ಹನ್ತ! ಕಥಂ ಭಜೇತ್ತ್ವಾಂ
ದಿವ್ಯೇ ಚ ಧಾಮನಿ ವಸನ್ತಮಹೋ! ಪರಾತ್ಮನ್॥

ತಾ॥ ನನ್ನ ಗೋಪಾಲಕನೇ! ನೀಲಮಣಿವರ್ಣನೇ! ನಿನ್ನ ನಾಭಿಯಿಂದ ಉತ್ಪನ್ನವಾದ ಮೂರುಲೋಕಗಳಲ್ಲೂ ವ್ಯಾಪಿಸಿ ನನ್ನ ಆತ್ಮತತ್ತ್ವವು ನಿನ್ನ ತೇಜೋರಾಶಿರೂಪವಾದ ಪ್ರದೇಶದೊಳಗೆ ನಿನ್ನನ್ನೂ ಕಂಡು ಆಶ್ರಯಿಸಿ ಉಜ್ಜೀವಿಸುವುದು ಹೇಗೋ ?

(೬) ವನ್ದಿಯಾದುಮಾಱಿಯೇನ್ ಮಲ್ಕು

ನೀಲಚ್ಚುಡರ್ ತತ್ತೈಪ್ಪ,
ಶೆಂಶುಡರ್‌ಚ್ಚೋದಿಕಳ್ ಪೂತ್ತೊರುಮಾಣಿಕ್ಕಮ್
ಶೇರ್ನ್ದು ಪೋಲ್,
ಅನ್ದರಮೇಲ್ ಶೆಮ್‌ಪಟ್ಟೋಡಡಿ
ಯುನ್ದಿಕೈಮಾರ್ವು ಕಣ್‌ವಾಯ್,
ಶೆಂಶುಡರ್ ಚ್ಚೋದಿ ವಿಡವುತ್ತ
ಯೆನ್‌ತಿರುಮಾರ್ಬನ್ನೈಯೇ.

ಪ್ರ॥ ಮಲ್ಕು – ಸೇರಿಕೊಂಡಿರುವ, ನೀಲಚ್ಚುಡರ್ – ನೀಲಕಾನ್ತಿಯು, ತತ್ತೈಪ್ಪ–ಹರಡಿಕೊಂಡಿರಲು, ಶೆಂಶುಡರ್–ಕೆಂಪುಕಾನ್ತಿಯುಳ್ಳ, ಶೋದಿಕಳ್–ತೇಜೋರಾಶಿಗಳು, ಪೂತ್ತು ಉತ್ಪನ್ನವಾಗಿರುವ, ಒರುಮಾಣಿಕ್ಕಮ್–ಒಂದು ನೀಲರತ್ನವು, ಶೇರ್ನ್ದುಪೋಲ್–ಹೊಂದಿ ಇರುವಂತೆ, (ಮೇಲೆ ಪರಮಾಕಾಶದಲ್ಲಿ) ಶೆಮ್-ಕೆಂಪು ಬಣ್ಣವುಳ್ಳ, ಪಟ್ಟೋಡು–ಪೀತಾಮ್ಬರದೊಡನೆ, ಅಡಿ–ಪಾದಗಳೂ, ಉನ್ದಿ–ನಾಭಿಯೂ, ಕೈ–ಹಸ್ತಗಳೂ, ಮಾರ್ವು–ವಕ್ಷಸ್ಸ್ಥಲವೂ, ಕಣ್–ನೇತ್ರಗಳೂ, ವಾಯ್-ವಕ್ತ್ರವೂ (ಅಧರವೂ), ಶೆಂಶುಡರ್-ಕೆಂಪುಕಾಂತಿಯುಳ್ಳ, ಶೋದಿ-ತೇಜಸ್ಸನ್ನು, ವಿಡ–ಹರಡುವಂತೆ, ಉತ್ತ–ಬಿಜಯಮಾಡಿ ಇರುವ, ಎನ್–ನನ್ನ, ತಿರುಮಾರ್ಬನ್ನೈಯೇ- ಲಕ್ಷ್ಮೀಧರ ವಕ್ಷಸ್ಸ್ಥಲವುಳ್ಳ ಸ್ವಾಮಿಯನ್ನು, ವನ್ದು–ಬಂದು, ಎಯ್ದುಮಾಱು–ಹೊಂದುವ ಪ್ರಕಾರವನ್ನು, ಅಱಿಯೇನ್–(ನಾನು) ಅರಿಯೆನು.

( ಸ-ಗಾ-ರ ॥ )—

ಮಾಣಿಕ್ಯನೀಲತನುರೇವ ಶಿಲಾಸಿ ರಕ್ತೈ-
ಸ್ಸೂನ್ನೈರಿವಾರುಣದುಕೂಲಕರಾಂಘ್ರಿನೇತ್ರೈಃ ।
ನಾಭೀಪುಟಾನನಹೃದಮ್ಬುಜ-ತೇಜಸಾ ಚ
ಶ್ರೀವತ್ಸಲಾಂಛನ ! ನ ವೇದ್ಮಿ ಗತಿಂ ತವಾಪ್ತ್ಯೈ ॥

ತಾ॥ ಒಂದು ನೀಲರತ್ನದಲ್ಲಿ ಕೆಂಪು ತೇಜೋರಾಶಿಗಳು ಹುಟ್ಟಿರುವಂತೆ ನೀಲಮಣಿಸದೃಶವಾದ ಶರೀರದಲ್ಲಿ ಕೆಂಪುಬಣ್ಣವುಳ್ಳ ಪದ್ಮಸದೃಶವಾದ ಪೀತಾಂಬರ-ಹಸ್ತ-ಪಾದ-ಹೃದಯ-ನೇತ್ರ-ವಕ್ತ್ರ-ನಾಭಿಗಳ ಕೆಂಪುಕಾನ್ತಿಯನ್ನು ಹರಡಿಕೊಂಡು ಬಿಜಯಮಾಡಿಸಿ ಇರುವ ಲಕ್ಷ್ಮೀಧರ ವಕ್ಷಸ್ಥನಾದ ನನ್ನ ಸ್ವಾಮಿಯನ್ನು ಸಮೀಪಿಸಿ ಹೊಂದುವ ಪ್ರಕಾರವನ್ನು ನಾನು ಅರಿಯೆನು.

(೭) ಎನ್ತಿರುಮಾರ್ಬನ್‌ತನ್ನೈ ಯೆನ್ಮಲೈಮಕಳ್
ಕೂಱನ್ ತನ್ನೈ,
ಎನ್ಱುಮೆನ್ನಾಮಕಳೈ ಯಕಮ್ಬಾಲ್ ಕೊಣ್ಡ ನಾನ್ಮುಕನೈ,
ನಿನ್ಱ ಶಚಿಪತಿಯೈ ನಿಲಮ್‌ಕೀಣ್ಡೆಯಿಲ್ ಮೂನ್ಱೆರಿತ್ತ,
ವೆನ್ಱು ಪುಲನ್ ತುರನ್ದ ವಿಶುಮ್ಬಾಳಿಯೈ ಕ್ಕಾಣೇನೋ.

ಪ್ರ॥ ಎನ್ ತಿರುಮಾರ್ಬನ್‌ತನ್ನೈ-ನನ್ನ ಶ್ರಿಯಃಪತಿಯಾದ ಸ್ವಾಮಿಯನ್ನು, ಎನ್ ಮಲೈಮಕಳ್ ಕೂಱನ್‌ತನ್ನೈ-ನನ್ನ ಪಾರ್ವತೀಪತಿಯಾದ ರುದ್ರನಿಗೆ ಅನ್ತರಾತ್ಮನಾದವನನ್ನು, ಎನ್ ನಾಮಕಳೈ-ನನ್ನ ವಾಗ್ದೇವಿಯಾದ ಸರಸ್ವತಿಯನ್ನು, ಅಕಮ್ಬಾಲ್‌ಕೊಣ್ಡ – ತನ್ನಲ್ಲಿ ಸ್ವೀಕರಿಸಿ ಇಟ್ಟುಕೊಂಡಿರುವ, ನಾನ್ಮುಕನೈ-ಚತುರ್ಮುಖನ ಅನ್ತರಾತ್ಮನನ್ನು, ನಿನ್ಱ-ಇವರಿಗೆ ಸಮನಾಗಿ ನಿಂತ, ಶಚಿಪತಿಯೈ-ಶಚೀಪತಿಯಾದ ಇನ್ದ್ರನಿಗೆ ಅನ್ತರ್ಯಾಮಿಯಾದವನನ್ನು, ನಿಲಮ್‌ಕೀಣ್ಡು-(ತನ್ನ ಸ್ವರೂಪದಿಂದ) ಭೂಮಿಯನ್ನು ಕಿತ್ತು ಎತ್ತಿ, ಮೂನ್ಱು ಎಯಿಲ್ ಎರಿತ್ತ-(ರುದ್ರಾನ್ತರ್ಯಾಮಿಯಾಗಿ) ತ್ರಿಪುರವನ್ನು ದಹಿಸಿದ, ಪುಲನ್ ವೆನ್ಱು ತುರನ್ದ-(ಬ್ರಹ್ಮನಿಗೆ ಅನ್ತರ್ಯಾಮಿಯಾಗಿ) ಇನ್ದ್ರಿಯಗಳನ್ನು ಜಯಿಸಿ ಓಡಿಸಿದ, ವಿಶುಮ್ಬು ಆಳಿಯೈ-(ಇನ್ದ್ರನಿಗೆ ಅನ್ತರ್ಯಾಮಿಯಾಗಿ) ಸ್ವರ್ಗಲೋಕವನ್ನು ಆಳಿದವನನ್ನು, ಕಾಣೇನೋ-ಕಾಣಲಾರೆನೋ ?

( ಸ-ಗಾ-೮ || )—

ಶ್ರೀಶಂ ಧರೋದ್ಧೃತಿಕರಂ ಗಿರಿಜಾಪತಿಂ ತ್ವಾಂ
ಪಶ್ಯಾಮಿ ಕಿಂ ತ್ರಿಪುರನಾಶಕಮಿನ್ದ್ರಿಯೇಶಮ್ |
ವಾಣೀಪತಿಂ ಕಿಮು ಶಚೀಶಮಿಹಾಮರೇಶಂ
ಸರ್ವಾತ್ಮಕೋಽಸಿ ಭಗವನ್! ವಿವಿಧೈಶ್ಚ ರೂಪೈಃ ||

ತಾ॥ ನನ್ನ ಶ್ರಿಯಃಪತಿಯಾಗಿಯೂ, ಪಾರ್ವತೀಪತಿಯಾದ ರುದ್ರನಿಗೆ ಅನ್ತರ್ಯಾಮಿಯಾಗಿಯೂ, ಸರಸ್ವತೀವಲ್ಲಭನಾದ ಚತುರ್ಮುಖನಿಗೆ ಅನ್ತರಾತ್ಮನಾಗಿಯೂ, ಶಚೀಪತಿಯಾದ ಇನ್ದ್ರನಿಗೆ ಅನ್ತರ್ಯಾಮಿಯಾಗಿಯೂ ಇದ್ದುಕೊಂಡು, ವರಾಹರೂಪದಿಂದ ಭೂಮಿಯನ್ನು ಉದ್ಧರಿಸಿ, ರುದ್ರಾನ್ತರ್ಯಾಮಿಯಾಗಿ ತ್ರಿಪುರದಹನವಂಮಾಡಿ, ಬ್ರಹ್ಮಾನ್ತರ್ಯಾಮಿಯಾಗಿ ಇನ್ದ್ರಿಯಗಳನ್ನು ಜಯಿಸಿ, ಇನ್ದ್ರಾನ್ತರ್ಯಾಮಿಯಾಗಿ ಸ್ವರ್ಗಲೋಕವನ್ನು ಆಳಿದ ಮಹಾಸ್ವಾಮಿಯನ್ನು ನಾನು ಕಾಣಲಾರೆನೋ ?

(೮) ಆಳಿಯೈಕ್ಕಣ್ಡು ಪರಿಯಾಯ್ ಅರಿಕಾಣ್
ನರಿಯಾಯ್, ಅರಕ್ಕರ್
ಊಳೈಯಿಟ್ಟಿಲಙ್ಗೈ ಕ್ಕಡನ್ದು ಪಿಲಮ್ಬುಕ್ಕೊಳಿಪ್ಪ
ಮೀಳಿಯಮ್ ಪುಳ್ಳೈಕ್ಕಡಾಯ್ ಮಿಡಲ್‌ಮಾಲಿಯೈ
ಕ್ಕೊನ್ರು, ಪಿನ್ನುಮ್
ಆಳುಯರ್ ಕುನ್ರಙ್ಗಳ್ ಶೆಯ್‌ದಡರ್ತ್ತಾನೈಯುಮ್,
ಕಾಣ್ಡುಮ್‌ಕೊಲೋ.

ಪ್ರ॥ ಆಳಿಯೈಕಾಣ್-ವ್ಯಾಳಿಯನ್ನು ಕಣ್ಡು, ಪರಿ ಆಯ್ – ಕುದುರೆಯಂತೆಯೂ, ಅರಿಕಾಣ್-(ಹರಿ) ಸಿಂಹವನ್ನು ಕಂಡ, ನರಿ ಆಯ್-ನರಿಯಂತೆಯೂ, ಅರಕ್ಕರ್-ರಾಕ್ಷಸರು, ಅನ್ರು-ಆ ಯುದ್ಧಕಾಲದಲ್ಲಿ, ಊಳೈಯಿಟ್ಟು-ಭಯದಿಂದ ಕೂಗಿಕೊಂಡು, ಇಲಙ್ಗೈ-ಲಂಕೆಯನ್ನು, ಕಡನ್ದು-ಬಿಟ್ಟು, ಪಿಲಮ್‌ಪುಕ್ಕು-ಬಿಲದ್ವಾರದಲ್ಲಿ ಪ್ರವೇಶಿಸಿ, ಒಳಿಪ್ಪ-(ಪಾತಾಳದಲ್ಲಿ) ಮರೆಸಿಕೊಳ್ಳಲು, ಮೀಳಿ-ಮಹಾಬಲಿಷ್ಠನಾದ, ಅಮ್-ರಮ್ಯರೂಪಿಯಾದ, ಪುಳ್ಳೈ-ಗರುಡನನ್ನು, ಕಡಾಯ್-ನಡೆಸಿ, ಮಿಡಲ್-ಪ್ರಬಲನಾದ, ಮಾಲಿಯೈ-ಮಾಲಿಯೆಂಬ ರಾಕ್ಷಸನನ್ನು, ಕೊನ್ರು-ಕೊಂದು, ಪಿನ್ನುಮ್-ಅನನ್ತರ, ಆಳ್‌ಕೊನ್ರು-ಅತಿ ಶೂರರಾದವರನ್ನು ಕೊಂದು,

ಉಯರ್–ಉನ್ನತವಾದ, ಕುನ್ಱಙ್ಗಳ್-ಪರ್ವತಗಳಂತೆ, ಶೆಯ್ದು-ಮಾಡಿ, ಅಡರ್ತ್ತಾ ನೈಯುಮ್ – ನಾಶಪಡಿಸಿದ ಉಪೇನ್ದ್ರನನ್ನೂ, ಕಾಣ್ಬೆನ್‌ಕೊಲೋ – ಕಾಣುವೆನೋ ?

( ಸ–ಗಾ–ರ ॥ )—

ಭೀತಾ ನಿಶಾಚರಗಣಾಸ್ತು ಬಿಲಂ ಪ್ರವಿಷ್ಟಾ
ಲಬ್ಧ್ವಾಪ್ರರಾತ್ಸಪದಿ ಮಾಲಿಮುಖಾಂಶ್ಚ ಶೂರಾನ್ |
ಹತ್ವಾಽಧಿರೂಢಗರುಡೇ ತು ಹರಾವುಪೇನ್ದ್ರೇ
ತ್ವಯ್ಯತ್ರ ಭಾಸ್ವತಿ ಕಥನ್ನು ವಿಲೋಕಯೇ ತ್ವಾಮ್ ? ॥

ತಾ॥ ವ್ಯಾಳಿಯನ್ನು ಕಂಡ ಕುದುರೆಯಂತೆಯೂ, ಸಿಂಹವನ್ನು ಕಂಡ ನರಿಯಂತೆಯೂ, ರಾಕ್ಷಸರು ಆ ಯುದ್ಧಕಾಲದಲ್ಲಿ ಭಯದಿಂದ ಕೂಗಿಕೊಂಡು ಬಿಲದ್ವಾರದಲ್ಲಿ ಪ್ರವೇಶಿಸಿ ಪಾತಾಳದಲ್ಲಿ ಮರೆಸಿಕೊಳ್ಳಲು, (ಮಹಾ ಬಲಿಷ್ಠನಾದ ಗರುಡನನ್ನು ನಡೆಸಿ) ಪ್ರಬಲನಾದ ಮಾಲಿಯನ್ನು ಶ್ರೀರಾಮರೂಪಿಯಾಗಿ ಕೊಂದು, ಅನನ್ತರ ಅತಿ ಶೂರರನ್ನು ಕೊಂದು ಉನ್ನತ ಪರ್ವತಾಕಾರವಾಗಿ ಮಾಡಿದ ಉಪೇನ್ದ್ರನನ್ನು ಕಾಣುವೆನೋ ?

(೯) ಕಾಣ್ಬೆನ್‌ಕೊಲೋ ನೆಞ್ಜಮೇ ಕಡಿಯವಿನೈಯೇ
ಮುಯಲುಮ್,
ಆಣ್ ತಿಱಲ್ ಮೀಳಿಮೊಯ್ಮ್ಬಿಲರಕ್ಕನ್
ಕುಲತ್ತೈತ್ ತಡಿನ್ದು,
ಮೀಣ್ಡುಮವನ್ ತಮ್ಬಿಕ್ಕೇ ವಿರಿನೀರಿಲಙ್ಗೈಯರುಳಿ,
ಆಣ್ಡು ತನ್ ಶೋದಿ ಪುಕ್ಕವಮರರರಿ ಯೇಱಿನೈಯೇ.

ಪ್ರ॥ ಕಡಿಯ–ಅತಿ ಕ್ರೂರವಾದ, ವಿನೈಯೇ-(ಹಿಂಸಾರೂಪವಾದ) ಮಹಾ ಪಾಪವನ್ನೇ, ಮುಯಲುಮ್–ಮಾಡುವ, ಆಣ್–ಪೌರುಷವನ್ನೂ, ತಿಱಲ್–ಶೌರ್ಯ ವನ್ನೂ ಉಳ್ಳ, ಮೀಳಿ–ಸಿಂಹದಂತೆ, ಮೊಯ್ಮ್ಬಿಲ್–ಮಹಾ ಪರಾಕ್ರಮಶಾಲಿ ಯಾದ, ಅರಕ್ಕನ್–ರಾವಣಾಸುರನ, ಕುಲತ್ತೈ–ವಂಶವನ್ನು, ತಡಿನ್ದು-(ನಿಶ್ಶೇಷ ವಾಗಿ) ನಿರ್ಮೂಲಮಾಡಿ, ಮೀಣ್ಡುಮ್–ಅನನ್ತರ, ಅವನ್‌ತಮ್ಬಿಕ್ಕು–ಅವನ ತಮ್ಮ ನಾದ ವಿಭೀಷಣನಿಗೆ, ವಿರಿನೀರ್–ವಿಸ್ತೀರ್ಣವಾದ ಸಮುದ್ರಜಲವುಳ್ಳ, ಇಲಙ್ಗೈ– ಲಂಕಾರಾಜ್ಯವನ್ನು, ಅರುಳಿ–ಅನುಗ್ರಹಿಸಿ, ಆಣ್ಡು–ಅಯೋಧ್ಯೆಯಲ್ಲಿ ಚಿರಕಾಲ

ರಾಜ್ಯಪರಿಪಾಲನವಂಮಾಡಿ, ತೇ ಶೋದಿ-ತನ್ನ ಜ್ಯೋತಿರ್ಮಣ್ಡಲವಾದ ಪರಮ ಪದದಲ್ಲಿ, ಪುಕ್ಕ-ಪ್ರವೇಶಿಸಿದ, ಅಮರರ್-ನಿತ್ಯಸೂರಿಗಳಿಗೆ, ಅರಿ-(ಹರಿ) ಸಿಂಹ ದಂತೆ ಶ್ರೇಷ್ಠನಾಗಿ, ಏಱ್ಱನ್ನೈಯೇ-ತನ್ನ ಮಹಿಮೆಯೊಡನೆ ಬಿಜಯಮಾಡಿರುವ ವನನ್ನು, ನೆಞ್ಜಮೇ-ಮನಸ್ಸೇ, ಕಾಣ್ಡುಮ್‌ಕೊಲೋ-ಕಾಣಬಹುದೋ ?

( ಸ-ಗಾ-ರ ॥ )—

ಕ್ರೂರಂ ನಿಶಾಚರಪತಿಂ ಪ್ರಬಲಂ ಚ ವೀರಂ
ಹತ್ವಾ ಸಮೂಲಮಪಿ ತಸ್ಯ ಕಿಲಾನುಜಾಯ ।
ಲಙ್ಕಾಧಿಪತ್ಯಕೃದಗಾತ್ ಪರಮಂ ಪದಂ ಯೋ
ರಾಜ್ಯಂ ದಧಚ್ಚಿರಮಮುನ್ತು ಕದಾ ಭಜಾಮಃ? ॥

ತಾ॥ ಎಲೈ ಮನಸ್ಸೇ ! ಅತಿ ಕ್ರೂರವಾದ ಮಹಾ ಪಾಪವನ್ನು ಮಾಡುವ ಸಿಂಹದಂತೆ ಮಹಾಪರಾಕ್ರಮಶಾಲಿಯಾದ ರಾವಣಾಸುರನ ಕುಲವನ್ನು ನಿರ್ಮೂಲ ಮಾಡಿ, ಅವನ ತಮ್ಮನಾದ ವಿಭೀಷಣನಿಗೆ ಲಂಕಾರಾಜ್ಯವನ್ನು ಅನುಗ್ರಹಿಸಿ, ಅಯೋಧ್ಯೆಯಲ್ಲಿ ಚಿರಕಾಲ ರಾಜ್ಯಪರಿಪಾಲನವಂಮಾಡಿ, ತನ್ನ ಜ್ಯೋತಿರ್ಮಣ್ಡಲ ವಾದ ಪರಮಪದವನ್ನು ಪ್ರವೇಶಿಸಿದ ನಿತ್ಯಸೂರೀಶ್ವರನನ್ನು ನಾವು ಕಾಣಬಲ್ಲೆವೋ?

(೧೦) ಏಱ್ಱರುವರ್ ವೈಕುನ್ದತ್ತೈಯರುಳುವರ್
ನಮಕ್ಕು, ಆಯರ್‌ಕುಲತ್ತು
ಈಱ್ಱಿಳಮ್ಪಿಳ್ಳೈ ಯೊನ್ಱಾಯ್ ಪ್ಪುಕ್ಕು
ಮಾಯಙ್ಗಳೇ ಇಯಱ್ಱಿ
ಕೂಱ್ಱಿಯಲ್ ಕಞ್ಜನೈಕ್ಕೊನ್ಱು ಐವರ್‌ಕ್ಕಾಯ್
ಕೊಡುವೆರ್ ಶೇನ್ನೈ ತಡಿನ್ದು,
ಆಱ್ಱಲ್‌ಮಿಕ್ಕಾನ್ ಪೆರಿಯ ಪರಂಶೋದಿ ಪುಕ್ಕವರಿಯೋ.

ಪ್ರ॥ ಈಱ್ಱು (ಈನ್ಱು)-ಹುಟ್ಟಿದಾಗಲೇ, ಇಳಮ್ ಪಿಳ್ಳೈ ಒನ್ಱಾಯ್-ಅತಿ ಬಾಲ್ಯವುಳ್ಳ ಒಂದು ಶಿಶುವಾಗಿ, ಆಯರ್‌ಕುಲತ್ತು-ಗೋಪಕುಲದಲ್ಲಿ, ಒನ್ಱಾಯ್-ಏಕೀಭವಿಸಿ, ಪುಕ್ಕು - ಪ್ರವೇಶಿಸಿ, ಮಾಯಙ್ಗಳೇ - ಅಶ್ಚರ್ಯ ಚೇಷ್ಟಿತಗಳನ್ನೇ (ಪೂತನಾ-ಶಕಟ-ಯಮಳಾರ್ಜುನಾದಿ ಭಙ್ಗನ ವ್ಯಾಪಾರಗಳನ್ನೇ), ಇಯಱ್ಱಿ-ಮಾಡಿ, ಕೂಱ್ಱು ಇಯಲ್-ಯಮನ ಸ್ವಭಾವವುಳ್ಳ, ಕಞ್ಜನೈ-ಕಂಸನನ್ನು,

ಕೊನ್ರು-ಕೊಂದು, ಐವರ್ಕ್ಕು ಆಯ್-ಐದುಮಂದಿ ಪಾಣ್ಡವರಿಗಾಗಿ, ಕೊಡುಮ್ ಶೇನೈ-ಕ್ರೂರವಾದ (ದುರ್ಯೋಧನನ) ಸೈನ್ಯವನ್ನು, ತಡಿನ್ದು-ನಾಶಪಡಿಸಿ, ಅನ್ರಿಲ್ ಮಿಕ್ಕಾ - ಶಾನ್ತಿಗುಣಾಧಿಕ್ಯವುಳ್ಳವನಾಗಿ, ಪೆರಿಯ - ಮಹಾಮಹಿಮೆಯುಳ್ಳ, ಪರಂಜೋದಿ - ಪರಮಪದದಲ್ಲಿ, ಪುಕ್ಕ-ಪ್ರವೇಶಿಸಿದ, ಅರಿ-ಸಿಂಹರೂಪಿಯಾದ ಶ್ರೀಕೃಷ್ಣನು, ಎನ್ನರುಮ್-ಪರಮಯೋಗಿಗಳಿಗೂ ವಾಙ್ಮನಸಗಳಿಗೆ ಗೋಚರ ವಾಗದ, ವೈಕುನ್ದತ್ತೈ-ಪರಮಪದವನ್ನು, ನಮಕ್ಕು ಅರುಳುಮ್-ನಮಗೆ ಕೃಪೆ ಮಾಡಿ ಕೊಡುವನು.

( ಸ-ಗಾ-ರ ॥ )—

ಜಾತಶ್ಶಿಶುಸ್ಸ ಕಿಲ ಗೋಕುಲಪುಷ್ಟ ಆಸೀ-
ದತ್ಯದ್ಭುತಸ್ವಚರಿತಃ ಖಲಕಂಸಹನ್ತಾ ।
ಪಶ್ಚಾಚ್ಛ್ರಿತೋಽರಿಸ್ಸ್ಮೃತನಾನ್ತಕ ಏಷ ದಿವ್ಯಂ
ಧಾಮ ಶ್ರಿತಃ ಕಿಲ ದದಾತಿ ಪರಂ ಪದಂ ನಃ ॥

ತಾ॥ ಹುಟ್ಟಿದಾಗಲೇ ಶಿಶುವಾಗಿಯೇ ಗೋಕುಲದಲ್ಲಿ ಪ್ರವೇಶಿಸಿ, ಅಲ್ಲಿ ಪುಷ್ಟ ವಾಗಿ ಅತ್ಯದ್ಭುತ ಮಾಯಾಚೇಷ್ಟಿತಗಳನ್ನು ಮಾಡಿ, ಮೃತ್ಯುಸದೃಶನಾದ ಕಂಸ ನನ್ನು ಕೊಂದು, ಐದುಮಂದಿ ಪಾಣ್ಡವರಿಗಾಗಿ ದುರ್ಯೋಧನನ ಸೈನ್ಯವನ್ನು ನಾಶ ಪಡಿಸಿ, ಭೂಭಾರಹರಣಾನನ್ತರ ಅತಿಶಾನ್ತ ಗುಣಪೂರ್ಣನಾಗಿ ತನ್ನ ಸಾಕ್ಷಾ ತ್ಪರಮಪದವನ್ನು ಪ್ರವೇಶಿಸಿದ ಶ್ರೀಕೃಷ್ಣನು, ಪರಮಪದವನ್ನು ನಮಗೆ ಕೃಪೆ ಮಾಡಿ ಕೊಡುವನು

(೧೧) ಪುಕ್ಕ ವರಿಯುರುವಾಯವುಣನುಡಲ್ ಕೀಣ್ಡುಕನ್ದ,
ಶಕ್ಕರಚ್ಚೆಲ್ವರ್ತನ್ನೈತ್ತಿರುಕ್ಕುರುಕೂರ್ ಚ್ಚಡಕೋಪನ್ ಶೊನ್ನ
ಮಿಕ್ಕ ವೋರಾಯಿರತ್ತುಳ್ಳಿವೈಪತ್ತುಮ್ ವಲ್ಲಾರವರ್ಕ್ಕೆ
ತೊಕ್ಕ ಪ್ಪಲ್ಲಾಣ್ಡಿಶೈತ್ತು ಕ್ಕವರಿಶೆಯ್ವರೇಲ್ಸ್ಯಯರೇ.

ಪ್ರ॥ ಅ-ಅತ್ಯದ್ಭುತವಾದ, ಅರಿ ಉರುವಾಯ್-ನರಸಿಂಹರೂಪವುಳ್ಳವನಾಗಿ, ಪುಕ್ಕು-ಪ್ರವೇಶಿಸಿ, ಅವುಣ-ಹಿರಣ್ಯಾಸುರನ, ಉಡಲ್‌ಕೀಣ್ಡು - ಶರೀರವನ್ನು ಸೀಳಿ, ಉಕನ್ದ-ಪ್ರೀತನಾದ, ಶಕ್ಕರ-ಚಕ್ರಧರನಾದ, ಶೆಲ್ವತನ್ನೈ-ಶ್ರೀಮನ್ತ ನಾದ ಸ್ವಾಮಿಯನ್ನು, ಕುರುಕೂರ್ ಶಡಕೋಪನ್-ಶ್ರೀ ಕುರುಕಾಪುರಿಯ ಶಠಾರಿ ಮುನಿಯು, ಶೊನ್ನ-ಸ್ತೋತ್ರಮಾಡಿ ರಚಿಸಿದ, ಮಿಕ್ಕ ಓರ್ ಆಯಿರತ್ತುಳ್-

ಶ್ಲಾಘ್ಯವಾದ ಅನ್ಯಾದೃಶವಾದ ಸಹಸ್ರ ಪದ್ಯಮಾಲೆಯೊಳು, ಇವ್ವೈಪತ್ತುಮ್-ಈ ಹತ್ತು ಪದ್ಯಗಳನ್ನು, ವಲ್ಲಾರ್ ಅವರ್ಕ್ಕೆ-ಅಭ್ಯಸಿಸಬಲ್ಲವರನ್ನು, ಏೞೈಯರ್-ದಿವ್ಯಾಪ್ಸರಸ್ತ್ರೀಯರು, ತೊೞ್ಕ್ಕ-ಗುಂಪು ಸೇರಿ, ಪಲ್ಲಾಣ್ಡು ಇಶೈತ್ತು-ಮಙ್ಗಳಾಶಾಸನಮಾಡಿ, ಕವರಿಶೆಯ್ವರ್-ಚಾಮರವನ್ನು ಬೀಸಿ ಉಪಚರಿಸುವರು.

( ಸ-ಗಾ-ರ || )—

ದೈತ್ಯಾನ್ತಕಂ ನರಹರಿಂ ನನು ಚಕ್ರಪಾಣಿಂ
ಶ್ರೀಶಂ ಶಠಾರಿರಭಜತ್ಕುರುಕಾಪುರೇಶಃ |
ಸಾಹಸ್ರಪದ್ಯಕೃದಿದಂ ದಶಕಂ ಪಠನ್ತ-
ಸ್ಸೇವ್ಯಾ ಭವನ್ತಿ ದಿವಿ ಚಾಮರಧಾರಿಣೀಭಿಃ ||

ತಾ|| ಅತ್ಯದ್ಭುತವಾದ ನರಸಿಂಹರೂಪದಿಂದ ಹಿರಣ್ಯಾಸುರನ ಶರೀರವನ್ನು ಸೀಳಿ ಸನ್ತುಷ್ಟನಾದ ಚಕ್ರಧರನಾದ ಶ್ರೀ ಸ್ವಾಮಿಯನ್ನು ಕುರುಕಾಪುರಿಯ ಶಠಾರಿ ಮುನಿಯು ಸ್ತೋತ್ರಮಾಡಿ ರಚಿಸಿದ ಸಹಸ್ರಪದ್ಯಾವಳಿಯಲ್ಲಿ ಈ ದಶಕವನ್ನು ಅಭ್ಯಾಸಮಾಡಬಲ್ಲವರನ್ನು ದಿವ್ಯಾಪ್ಸರಸ್ತ್ರೀಯರು ಗುಂಪುಸೇರಿ ಮಙ್ಗಳಾಶಾಸನ ಮಾಡಿ ಚಾಮರವನ್ನು ಬೀಸಿ ಉಪಚರಿಸುವರು.

( ದ್ರ-ಉ-ಸಂ || )—

ತಾದೃಗ್ಗುಣಪ್ರವಿಶದಾನುಭವಪ್ರವೃದ್ಧ-
ಸ್ವಾಪೇಕ್ಷಿತಾಭಿರುಚಿತಾರ್ತಿಮಹಾರ್ಣವಸ್ಸನ್ |
ಪ್ರಾಪ್ಯಂ ಶರಣ್ಯಮಪಿ ವೀಕ್ಷ್ಯ ಕದಾಽನುಗಸ್ಸ್ಯಾ-
ಮಙ್ಘ್ರ್ಯೋಸ್ತವೇತಿ ವಿಲಲಾಪ ಮುನಿಸ್ಸ ಷಷ್ಠೇ ||

(ದ್ರ-ಉ-ತಾ-ರ || )—

ನಾಭೀಪದ್ಮೋಜ್ಜ್ವಲತ್ವಾದ್ವಿಧಿಶಿವಭಜನೀಯಾಙ್ಘ್ರಿಭಾವಾದ್ಗವಾಂ ಚ
ತ್ರಾಣಾದ್ವೈಶ್ಯಸ್ಸರ್ವಭೂತಾನ್ತರನಿಯಮನತಸ್ಸಂಶ್ರಿತೇ ಭವ್ಯಭಾವಾತ್ |
ಬ್ರಹ್ಮಾದ್ಯಾಪದ್ವಿಮೋಕ್ಷಾದಸುರನಿರಸನಾತ್ತ್ರಾತರಕ್ಷೋಽನುಜತ್ವಾತ್
ಸ್ತ್ರೀಯಾಕ್ರನ್ದಾಪಹಾರೀ ಭವತಿ ಚ ಭಗವಾನಿತ್ಯವಾದೀಚ್ಛಠಾರಿಃ ||

(ಈ ಷಷ್ಠದಶಕದ ಸಾರಾಂಶ)—

ಈ ಆರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಸಾಕ್ಷಾತ್ಕಾರವನ್ನು ಅಪೇಕ್ಷಿಸಿ, ಸೃಷ್ಟಿಮಾಡಿದ ವೈಚಿತ್ರ್ಯವನ್ನೂ, ಅವತಾರಗಳ ವೈಭವವನ್ನೂ, ಬ್ರಹ್ಮ ರುದ್ರೇನ್ದ್ರಾದಿಗಳಿಗೆ ಅನ್ತರ್ಯಾಮಿಯಾಗಿ ಮಾಡುವ ವ್ಯಾಪಾರ

ಗಳನ್ನೂ, ದಿವ್ಯಮಂಗಳವಿಗ್ರಹದ ಸೌನ್ದರ್ಯಾತಿಶಯವನ್ನೂ, ರಾಮಾವತಾರದ ಅತಿಮಾನುಷ ಚೇಷ್ಟಿತಗಳನ್ನೂ, ಕೃಷ್ಣಾವತಾರದ ಅದ್ಭುತ ಕಾರ್ಯಗಳನ್ನೂ ಅನುಸನ್ಧಾನಮಾಡಿ, ಇನ್ತಹ ಭಗವನ್ತನಾದ ನಿನ್ನನ್ನು ಹೇಗೆ ನಾನು ಹೊಂದುವೆನೆಂದು ಕ್ರನ್ದನವಂಮಾಡಿ, ಕ್ರಮೇಣ ಶ್ರೀಕೃಷ್ಣನೇ ನಮಗೆ ಪರಮಪದವನ್ನು ಕೊಡುವನೆಂದು ನಿರ್ಣಯಿಸಿ ಫಲಶ್ರುತಿಯನ್ನೂ ಹೇಳಿರುತ್ತಾರೆ.

ಶ್ರೀಃ

## ಸಪ್ತಮಶತಕದಲ್ಲಿ—ಸಪ್ತಮದಶಕ.

(ಏೞೈಯರಾವಿ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂಪಡೆದು—
ಶ್ರೀ ಭಗವನ್ತನ ಅವಯವಸೌನ್ದರ್ಯವನ್ನು ಚಿನ್ತಿಸಿ, ವಿರಹವೇದನೆಯನ್ನು
ಸಹಿಸಲಾರದೆ, ಜನನಿಯರಿಗೂ, ಸಖೀಜನರಿಗೂ ಈ ನಾಯಕಿಯು
ತನ್ನ ದಶೆಯನ್ನು ಹೇಳುವಂತೆ ವರ್ಣಿಸಿ ಇರುತ್ತಾರೆ.)

---

(೧) ಏೞೈಯರಾವಿ ಯುಣ್ಣುಮಿಣೈಕ್ಕೂಱ್ಱಙ್ಗೊಲೋ
ವಱಿಯೇನ್,
ಆೞಿಯಙ್ಕಣ್ಣಪಿರಾನ್ ತಿರುಕ್ಕಣ್‌ಕಳ್‌ಕೊಲೋ
ವಱಿಯೇನ್,
ಶೂೞುವುಮ್ ತಾಮರೈ ನಾಣ್‌ಮಲರ್‌ಪೋಲ್
ವನ್ದು ತೋನ್ಱುಮ್ ಕಣ್ಡೀರ್,
ತೋೞಿಯರ್‌ಕಾಳನ್ನೈಮೀರೆನ್‌ಶೆಯ್‌ಕೇನ್
ತುಯರಾಟ್ಟಿಯೇನೇ.

ಪ್ರ॥ ಏೞೈಯರ್-ಸ್ತ್ರೀಜನರ, ಆವಿ-ಪ್ರಾಣಗಳನ್ನು, ಉಣ್ಣುಮ್-ಭಕ್ಷಿಸುವಂತಹ, ಇಣೈ-ಜೋಡಿಯಾದ, ಕೂಱ್ಱಮ್‌ಕೊಲೋ-ಯಮನೋ, ಅಱಿಯೇನ್-ತಿಳಿಯೆನು. ಆೞಿ-ಸಮುದ್ರದಂತೆ, ಅಮ್-ರಮ್ಯನಾದ, ಕಣ್ಣಪಿರಾನ್--ಕೃಷ್ಣ

ಸ್ವಾಮಿಯ, ತಿರುಕ್ಕಣ್‌ಕಳ್ ಕೊಲೋ–(ಎರಡು) ನೇತ್ರಗಳೋ!, ಅಱಿಯೇ‌ಱ್–ತಿಳಿಯೆನು. ಶೂಱುಮ್–ಸುತ್ತುತ್ತಿರುವ, ತಾಮರೈ–ತಾವರೆಯ, ನಾಳ್ (ನಾಣ್) ಮಲರ್‌ಪೋಲ್ – ನೂತನವಾದ ಪುಷ್ಪಗಳಂತೆ, ವನ್ದು–ಬಂದು, ತೋನ್ಱುಮ್ ಕಣ್ಣೀರ್–ತೋರುತ್ತಿವೆ ನೋಡಿರಿ. ತೋೞಿಯರ್‌ಕಾಳ್–ಸಖಿಯರೇ! ಅನ್ನೈಮಿರ್ – ಜನನಿಯರೇ! ತುಯರಾಟ್ಟಿಯೇ‌ಱ್ – ದುಃಖಿಸುತ್ತಿರುವ ನಾನು, ಎ‌ಱ್ ಶೆಯ್‌ಕೇ‌ಱ್–ಏನು (ಪರಿಹಾರ) ಮಾಡಲಿ ?

( ಸ–ಗಾ–ರ ॥ )—

ನಾರೀಜನಾನ್ತಕಯುಗಂ ಕಿಮಿದಂ ತು ದಿವ್ಯಂ
ಶ್ರೀಕೃಷ್ಣಲೋಚನಯುಗಂ ತ್ವಥವಾ ನ ವೇದ್ಮಿ ।
ನವ್ಯಾಮ್ಬುಜದ್ವಯಮಿವಾಸ್ತಿ ಪುರೋ ಮಮಾಕ್ಷ್ಣೋಃ !
ಕಿಂ ಮಾತರೋ ! ಮಮ ಸಖೀನಿವಹಾಶ್ಚ ! ಕುರ್ಯಾಮ್ ? ॥

ತಾ॥ ನಾರೀಜನರನ್ನು ಕೊಲ್ಲುವ ಮೃತ್ಯುದ್ವಯವೋ! ಶ್ರೀಕೃಷ್ಣನ ನೇತ್ರದ್ವಯವೋ! ನಾನರಿಯೆನು. ನನಗೆ ಅವು ಎರಡು ತಾವರೆಹೂವುಗಳಂತೆ ತೋರುತ್ತಿವೆ— ನೋಡಿರಿ. ಸಖಿಯರೇ! ಜನನಿಯರೇ! ದುಃಖಿತೆಯಾದ ನಾನು ದುಃಖಪರಿಹಾರಕ್ಕೆ ಏನುಮಾಡಲಿ ?

(೨) ಅಟ್ಟೆಯುಮ್ ತೂಱ್ಱಿಯುಮ್ ನಿನ್ಱನ್ನೈಮಿರೆನ್ನೈ
ನೀರ್ ನಲಿನ್ದೆ‌ಱ್,
ಮಾಟ್ಟುಯರ್ ಕಱ್ಪಕತ್ತಿ‌ಱ್ ವಲ್ಲಿಯೋ ಕೊೞುನ್ದೋ
ವಱಿಯೇ‌ಱ್,
ಈಟ್ಟಿಯವೆಣ್ಣೈಯುಣ್ಡಾ‌ಱ್ ತಿರುಮೂಕ್ಕೆನದಾವಿಯುಳ್ಳೇ,
ಮಾಟ್ಟಿಯವಲ್‌ವಿಳಕ್ಕಿ‌ಱ್‌ಶುಡರಾಯ್‌ನಿಱ್ಕುಮ್‌ವಾಲಿಯದೇ

ಪ್ರ॥ ಅನ್ನೈಮಿರ್–ಜನನಿಯರೇ !, ನೀರ್–ನೀವು, ಅಟ್ಟೆಯುಮ್–ಅಡಿಸುತ್ತಲೂ, ತೂಱ್ಱಿಯುಮ್–ನಿಂದಿಸುತ್ತಲೂ, ನಿನ್ಱು–ನಿಂತು, ಎನ್ನೈನಲಿನ್ದು–ನನ್ನನ್ನು ಕ್ಲೇಶಪಡಿಸಿ, ಎ‌ಱ್–ಏನುಪ್ರಯೋಜನ? ಮಾಟ್ಟು–ಪಾರ್ಶ್ವದಲ್ಲಿ, ಉಯರ್–ಉನ್ನತವಾಗಿ ಬೆಳೆದಿರುವ, ಕಱ್ಪಕತ್ತಿ‌ಱ್‌ವಲ್ಲಿಯೋ–ಕಲ್ಪಲತೆಯೋ, ಕೊೞುನ್ದೋ–ಅಂಕುರವೋ, ಅಱಿಯೇ‌ಱ್–ತಿಳಿಯೆನು. ಈಟ್ಟಿಯವೆಣ್ಣೈ–ಸೇರಿಸಿ ಉಂಡೆಮಾಡಿದ ಬೆಣ್ಣೆಯನ್ನು, ಉಣ್ಡಾ‌ಱ್–(ಚೌರ್ಯದಿಂದ) ಭಕ್ಷಿಸಿದ ಶ್ರೀಕೃಷ್ಣನ, ತಿರುಮೂಕ್ಕು–

ನಾಸಿಕೆಯು (ಮೂಗು), ಎನದಾವಿಯುಳ್ಳೇ–ನನ್ನ ಮನಸ್ಸಿನಲ್ಲಿ, ಮಾಟ್ಟಿಯ–ಮೇಲಕ್ಕೆ ಎತ್ತಲ್ಪಟ್ಟ, ವಾಲಿಯದು–ದೊಡ್ಡದಾಗಿ, ವಲ್–ಸ್ಥಿರವಾದ, ವಿಳಕ್ಕಿನ–ದೀಪದ, ಶುಡರಾಯ್ ನಿಱ್ಕುಮ್–ತೇಜಸ್ಸಿನಂತೆ ನಿಂತು ಪ್ರಕಾಶಿಸುವುದು.

( ಸ–ಗಾ–ರ || )—

ಹೇ ಮಾತರಃ ಕಿಮು ಫಲಂ ಮಮ ನಿನ್ದನಾದ್ಯೈಃ ?
ಕಿಂ ಕಲ್ಪವಲ್ಲ್ಯುತ ! ಲತಾಙ್ಕುರ ಏವ ಪಾರ್ಶ್ವೇ ? |
ನೋ ವೇದ್ಮ್ಯಹಂ ಹಿ ನವನೀತಹರಸ್ಯ ನಾಸಾ
ಚಿತ್ತೇ ಮಮಾಸ್ತಿ ಕಿಲ ದೀಪಶಿಖೇವ ದೀಪ್ರಾ ||

ತಾ|| ಜನನಿಯರೇ ! ನೀವು ನನ್ನನ್ನು ಅಲ್ಲಲ್ಲಿ ಸುತ್ತಿಸಿ ನಿಂದಿಸುವುದರಿಂದ ಏನುಪ್ರಯೋಜನ ! ನನ್ನ ಪಾರ್ಶ್ವದಲ್ಲಿ ಉನ್ನತವಾಗಿ ಬೆಳೆದಿರುವ ಕಲ್ಪವಲ್ಲಿಯೋ ಲತಾಙ್ಕುರವೋ ನನಗೆ ತಿಳಿಯದು. ನವನೀತಭಕ್ಷಕನಾದ ಶ್ರೀಕೃಷ್ಣನ ಮೂಗು ನನ್ನ ಮನಸ್ಸಿನಲ್ಲಿ ಉನ್ನತವಾಗಿ ಸ್ಥಿರವಾದ ದೀಪಶಿಖೆಯಂತೆ ಪ್ರಕಾಶಿಸುತ್ತಿದೆ.

(೩) ವಾಲಿಯದೋರ್ ಕನಿಕೊಲ್ ವಿನೈಯಾಟ್ಟಿಯೇನ್
ವಲ್ವಿನೈಕೊಲ್,
ಕೋಲಮ್ ತಿರಳ್ ಪವಳ ಕೊೞುಮ್
ತುಣ್ಡಙ್ಕೊಲೋ ಅಱಿಯೇನ್,
ನೀಲನೆಡುಮುಕಿಲ್ಪೋಲ್ ತಿರುಮೇನಿಯಮ್ಮಾನ್
ತೊಣ್ಡೈವಾಯ್,
ಏಲುಮ್ ತಿಶೈಯುಳೆಲ್ಲಾಮ್ ವನ್ದು
ತೋನ್ಱುಮೆನ್ನಿನ್ನುಯಿರ್ಕ್ಕೇ.

ಪ್ರ|| ವಾಲಿಯದು–ಶ್ಲಾಘ್ಯವಾದ, ಓರ್–ಅದ್ವಿತೀಯವಾದ, ಕನಿಕೊಲ್–ಪಕ್ವಫಲವೋ, ವಿನೈಯಾಟ್ಟಿಯೇನ್–ಪಾಪಿನಿಯಾದ ನನ್ನ, ವಲ್–ಪ್ರಬಲವಾದ, ವಿನೈಕೊಲ್–ಮೂರ್ತಿಮತ್ತಾದ ಪಾಪವೋ, ಕೋಲಮ್–ಸೌನ್ದರ್ಯಾದಿಗುಣಗಳು, ತಿರಳ್ – ಸಂಘೀಭೂತವಾಗಿರುವ, ಪವಳ–ಹವಳದ, ಕೊೞುಮ್ – ರಮ್ಯವಾದ, ತುಣ್ಡಮ್‌ಕೊಲೋ–ಶಕಲವೋ, ಅಱಿಯೇನ್–ನಾನು ತಿಳಿಯೆನು. ನೀಲ–ಶ್ಯಾಮಳವಾದ, ನೆಡು–ದೊಡ್ಡದಾದ, ಮುಕಿಲ್‌ಪೋಲ್–ಮೇಘದಂತೆ, ತಿರುಮೇನಿ–ಶರೀರವುಳ್ಳ, ಅಮ್ಮಾನ್–ಸ್ವಾಮಿಯ, ತೊಣ್ಡೈವಾಯ್–ಬಿಂಬಫಲದಂತೆ ಇರುವ ಅಧರವು,

ಏಲುಮ್ ಶಿಶೈಯುಳ್ ಎಲ್ಲಾಮ್-ಯಾವ ಯಾವ ದಿಕ್ಕುಗಳಲ್ಲಿ ನೋಡಿದರೂ, ಎಣ್ ಇಣ್ ಉಯಿರ್‌ಕ್ಕು-ನನ್ನ ಭೋಗ್ಯವಾದ ಆತ್ಮವಸ್ತುವನ್ನು ಕುರಿತು, ವನ್ದು-ಬಂದು, ತೋನ್ಱುಮ್-ಪ್ರಕಾಶಿಸುತ್ತಿದೆ.

( ಸ-ಗಾ-ರ ॥ ) —

ದಿವ್ಯಂ ಫಲಂ ಕಿಮುತ ! ಕಿಂ ಮಮ ಪಾಪಪುಞ್ಜಂ ?
ಕಿಂ ವಾ ಪ್ರವಾಳಶಕಲೋ ? ನ ಹಿ ವೇದ್ಮಿ ಸಮ್ಯಕ್ |
ನೀಲಾಮ್ಬುದಾಭವಪುಷೋ ಮಮ ನಾಯಕಸ್ಯ
ಬಿಮ್ಬಾಧರೋ ದಿಶಿ ದಿಶೀಹ ಪುರೋ ಮಮಾಸ್ತೇ ॥

ತಾ॥ ಶ್ಲಾಘ್ಯವಾದ ಒಂದು ಪಕ್ವಫಲವೋ ? ಅಥವಾ ನನ್ನ ಪಾಪಪುಞ್ಜವೋ? ಅಥವಾ ಹವಳದ ತುಂಡೋ, ನಾನು ಅರಿಯೆನು. ನೀಲಮೇಘಶ್ಯಾಮನಾದ ಸ್ವಾಮಿಯ ಬಿಂಬಾಧರವು ಸರ್ವದಿಕ್ಕುಗಳಲ್ಲೂ ನನ್ನ ಎದುರಿಗೆ ನಿಂತು ಪ್ರಕಾಶಿಸುತ್ತಿದೆ.

(೪) ಇನ್ನುಯಿರ್ಕ್ಕೇೞೈಯರ್ಮೇಲ್ ವಳ್ಳೈಯುಮಿನ್ಱಿ
ನೀಲವಿಱ್ಕೊಲ್,
ಮನ್ನಿಯಶೀರ್ ಮದನನ್ ಕರುಪ್ಪುಚ್ಚಿಲೈಕ್ಕೊಲ್, ಮದನನ್
ತನ್ನುಯಿರ್ತ್ತಾದೈ ಕಣ್ಣಪ್ಪೆರುಮಾನ್ ಪುರುವಮವೈಯೇ
ಎನ್ನುಯಿರ್ ಮೇಲನವಾಯ್ ಅಡುಕಿನ್ಱನ ವೆನ್ಱು ನಿನ್ಱೇ.

ಪ್ರ॥ ಇಣ್ ಉಯಿರ್‌ಕ್ಕು - ಭೋಗ್ಯವಾದ ಪ್ರಾಣವನ್ನು ಭಕ್ಷಿಸುವುದಕ್ಕೆ, ಏೞೈಯರ್‌ಮೇಲ್-ಸ್ತ್ರೀಜನರಮೇಲೆ, ವಳ್ಳೈಯುಮ್-ಸುತ್ತಲೂ ಬಂದು ಹಿಂಸಿಸುವ, ನೀಲ-ನೀಲವಾದ, ಇಣೈವಿಲ್‌ಕೊಲ್ - ಜೋಡಿಯಾದ ಬಿಲ್ಲುಗಳೋ, (ಅಥವಾ) ಮನ್ನಿಯಶೀರ್-ಶ್ಲಾಘ್ಯವಾದ ಸೌನ್ದರ್ಯಾದಿಗುಣಗಳುಳ್ಳ, ಮದನನ್-ಮನ್ಮಥನ, ಕರುಪ್ಪುಚ್ಚಿಲೈಕ್ಕೊಲ್-ಇಕ್ಷುರೂಪವಾದ ಧನುಸ್ಸೋ, ಮದನನ್‌ತನ್-ಆ ಕಾಮನ, ಉಯಿರ್‌ತಾದೈ-ಪ್ರಾಣಭೂತನಾದ ತಂದೆಯಾದ, ಕಣ್ಣಪೆರುಮಾನ್-ಶ್ರೀಕೃಷ್ಣಸ್ವಾಮಿಯ, ಪುರುವಮ್ ಅವೈಯೇ - ಹುಬ್ಬುಗಳೇ, ಎಣ್ ಉಯಿರ್ ಮೇಲನ ಆಯ್-ನನ್ನ ಆತ್ಮವಸ್ತುವಿನಮೇಲೆ ನಿಂತು ಇದ್ದುಕೊಂಡು, ಎನ್ಱುಮ್-ಎಂದಿಗೂ, ನಿನ್ಱು-ಸ್ಥಿರವಾಗಿ ನಿಂತು, ಅಡುಕಿನ್ಱನ-ಕ್ಲೇಶಪಡಿಸುತ್ತಿವೆ.

( ಸ-ಗಾ-ರ ‖ )—

ನಾರೀವಧಾರ್ಥವಿಹ ನೀಲಧನುರ್ದ್ವಯಂ ಕಿಂ ?
ಕಾಮಸ್ಯ ಕಿಂ ತದಿದಮಿಕ್ಷುಧನುಸ್ಸ್ವರೂಪಮ್ ? |
ಕೃಷ್ಣಸ್ಯ ಕಾಮಜನಕಸ್ಯ ಕಿಲೇಶ್ವರಸ್ಯ
ಭ್ರೂಯುಗ್ಮಮೇವ ಸತತಂ ಹೃದಿ ಮೇಽಸ್ತಿ ಶಲ್ಯಮ್ ‖

ತಾ‖ ಸ್ತ್ರೀಜನರ ಸುತ್ತಲೂ ಆವರಿಸಿ ಅವರ ಪ್ರಾಣವನ್ನು ಭಕ್ಷಿಸುವುದಕ್ಕೆ ಬರುವ ಧನುರ್ದ್ವಯವೋ, ಅಥವಾ ರಮಣೀಯವಾದ ಮನ್ಮಥನ ಇಕ್ಷುಚಾಪವೋ? ಮದನಜನಕನಾದ ಶ್ರೀಕೃಷ್ಣನ ಭ್ರೂಯುಗ್ಮವೇ (ಎಲ್ಲಾ ಕಡೆಗಳಲ್ಲೂ) ನನ್ನ ಆತ್ಮವಸ್ತುವಿನಮೇಲೆ ಸ್ಥಿರವಾಗಿ ನಿಂತು ಇದ್ದು ಕ್ಲೇಶಪಡಿಸುತ್ತಿದೆ. (ಶಲ್ಯರೂಪವಾಗಿದೆ).

(೫೧) ಎನ್ರುಮ್ನಿನ್ರು ತಿಕಳುಮ್ ಶೆಯ್ಯ ವೀಱುಶುಡರ್
ವೆಣ್‌ಮಿನ್ನುಕ್ಕೋಲ್,
ಅನ್ರಿ ಯೆನ್ನಾವಿಯಡುಮಣಿಮುತ್ತಮ್ಕೋಲೋ
ವಱಿಯೇನ್,
ಕುನ್ರಮೆಡುತ್ತಪಿರಾನ್ ಮುಱುವಲೆನದಾವಿಯಡುಮ್,
ಒನ್ರುಮಱಿಕಿನ್ರಿಲೇನನ್ನೈಮಿರಾರೆನಕ್ಕುಯ್‌ವಿಡಮೇ.

ಪ್ರ‖ ಎನ್ರುಮ್-ಎಂದಿಗೂ, ನಿನ್ರೇ-ಸ್ಥಿರವಾಗಿ ನಿಂತು, ತಿಕಳುಮ್-ಪ್ರಕಾಶಿಸುವ, ಶೆಯ್ಯ-ಕೆಂಪುಬಣ್ಣವುಳ್ಳದುದಾಗಿ, ಈಱು-ಉಂಟಾಗುವ, ಶುಡರ್-ತೇಜಸ್ಸುಳ್ಳ, ವೆಣ್ (ವೆಳ್)-ಬಿಳೀ, ಮಿನ್ನುಕೋಲ್-ಮಿಂಚೋ? ಅನ್ರಿ-ಅಥವಾ, ಎನ್ ಆವಿ-ನನ್ನ ಪ್ರಾಣವನ್ನು, ಅಡುಮ್-ಹಿಂಸಿಸುವ, ಅಣಿ-ಅಲಂಕಾರವಾಗಿ ರಚಿಸಲ್ಪಟ್ಟ, ಮುತ್ತಮ್ ಕೋಲೋ-ಮುತ್ತುಗಳೋ, ಅಱಿಯೇನ್-ತಿಳಿಯೆನು. ಕುನ್ರಮ್-ಗೋವರ್ಧನ ಪರ್ವತವನ್ನು, ಎಡುತ್ತ-ಎತ್ತಿ ಗೋಪಗೋಪೀ ಜನರನ್ನು ರಕ್ಷಿಸಿದ, ಪಿರಾನ್-ಉಪಕಾರಕನಾದ ಸ್ವಾಮಿಯ, ಮುಱುವಲ್ - ಮನ್ದಹಾಸವು, ಎನದು ಆವಿ-ನನ್ನ ಆತ್ಮವಸ್ತುವನ್ನು, ಅಡುಮ್-ದಹಿಸುತ್ತಿದೆ. ಅನ್ನೈಮಿರ್-ಜನನಿಯರೇ, ಎನಕ್ಕು-ನನಗೆ, ಉಯ್‌ವು ಇಡಮೇ-ಉಜ್ಜೀವಿಸುವ ಸ್ಥಾನವನ್ನು, ಒನ್ರುಮ್ ಅಱಿಕಿನ್ರಿಲೇನ್-ಒಂದನ್ನೂ ತಿಳಿಯೆನು.

( ಸ-ಗಾ-ರ || )—

ಜ್ಯೋತಿರ್ಮಯೀ ಕಿಮಿಹ ವಿದ್ಯುದಿಯಂ ಸುಶುಭ್ರಾ
ಮುಕ್ತಾವಳೀ ಕಿಮಿಯಮಸ್ತಿ ಮಮಾಸುಹನ್ತ್ರೀ |
ಮನ್ದಸ್ಮಿತಂ ಗಿರಿಭೃತಸ್ತದಿದಂ ಪ್ರಭೋರ್ಮೇ
ಪ್ರಾಣಾನ್ ದಹತ್ಯಹಹ ! ಮೇ ನ ಗತಿರ್ಜನನ್ಯಃ! ||

ತಾ|| ಶಾಶ್ವತವಾಗಿ ನಿಂತು ಪ್ರಕಾಶಿಸುವ ತೇಜಸ್ಸುಳ್ಳ ಮಿಂಚೋ? ಅಥವಾ ನನ್ನ ಪ್ರಾಣವನ್ನು ಹಿಂಸಿಸುವ ಅಲಂಕಾರವಾಗಿ ರಚಿತವಾದ ಮುತ್ತುಗಳೋ? ಅರಿಯೆನು. ಗೋವರ್ಧನೋದ್ಧರಣವಂ ಮಾಡಿದ ಸ್ವಾಮಿಯ ಮನ್ದಹಾಸವು ನನ್ನ ಆತ್ಮವಸ್ತುವನ್ನು ದಹಿಸುತ್ತಿದೆ. ಜನನಿಯರೇ! ನನ್ನ ಉಜ್ಜೀವನ ಸ್ಥಾನ ವನ್ನು ಒಂದನ್ನೂ ತಿಳಿಯೆನು.

(೬) ಉಯಿರ್‌ವಿಡವೇಳ್ತ್ತೈಯರ್‌ಕ್ಕುಮಶುರರ್‌ಕ್ಕುಮರಕ್ಕರ್
ಕಳ್ಕುಮ್,
ಎವ್ವಿಡವೆನ್ರಿಲಙ್ಗಿ ಮಕರಮ್ ತಳೈಕ್ಕುಮ್ ತಳಿರ್‌ಕೊಲ್,
ಪೈವಿಡಪ್ಪಾಮ್ಬಣೈಯಾನ್ ತಿರುಕ್ಕುಣ್ಡಲಕ್ಕಾದುಕಳೇ,
ಕೈವಿಡಲೊನ್ರುಮಿನ್ರಿ ಯಡುಕಿನ್ರನ ಕಾಣ್‌ಮಿನ್‌ಕಳೇ.

ಪ್ರ|| ಏಳ್ತ್ತೈಯರ್‌ಕ್ಕುಮ್-ಸ್ತ್ರೀಜನಂಗೂ, ಅಶುರರ್‌ಕ್ಕುಮ್- ಅಸುರರಿಗೂ, ಅರಕ್ಕರ್‌ಕಳ್ಕುಮ್ - ರಾಕ್ಷಸರಿಗೂ, ಉಯಿರ್‌ವು ಇಡಮ್-ಉಜ್ಜೀವನ ಸ್ಥಲವು, ಎವ್ವಿಡಮ್ ಎನ್ರು-ಯಾವ ಸ್ಥಲವು ಎಂದು, ಇಲಙ್ಗಿ-ಪ್ರಕಾಶಿಸಿ, ಮಕರಮ್-ಮಕರ (ಮೊಸಳೆ) ರೂಪಿಯಾಗಿ, ತಳೈಕ್ಕುಮ್-ಚಿಗುರುವ, ತಳಿರ್‌ಕೊಲ್-ಪಲ್ಲವ ಗಳೋ, ಪೈ-ಫಣೆಗಳುಳ್ಳ, ವಿಡ-ವಿಷವುಳ್ಳ, ಪಾಮ್ಬು ಅಣೈಯಾನ್-ಶೇಷನನ್ನೇ ಶಯನವಾಗಿ ಉಳ್ಳ ಸ್ವಾಮಿಯ, ತಿರುಕ್ಕುಣ್ಡಲ-ಕುಣ್ಡಲಗಳನ್ನು ಧರಿಸಿರುವ, ಕಾದುಕಳೇ-ಶ್ರೋತ್ರಗಳೇ, ಒನ್ರುಮ್-ಒಂದು ಪ್ರಕಾರದಲ್ಲೂ, ಕೈವಿಡಲ್ ಇನ್ರಿ-ಕೈಬಿಡದೆ, ಅಡುಕಿನ್ರನ-ಹಿಂಸಿಸುತ್ತಿವೆ. ಕಾಣ್‌ಮಿನ್‌ಕಳೇ-ನೋಡಿರಿ.

( ಸ-ಗಾ-ರ || )—

ನಾರೀಜನಾಸುರಗಣಾದಿನಿವಾಸಭೂಮಿಃ
ಕುತ್ರೇತಿ ಭಾತಿ ಮಕರಾಕೃತಿರೇವ ಸೇಯಮ್ |
ಶ್ರೋತ್ರದ್ವಯೀ ರುಚಿರಕುಣ್ಡಲಶೋಭಿತೇಯಂ
ಕೃಷ್ಣಸ್ಯ ಶೇಷಶಯನಸ್ಯ ತುದೇತ್ ಸದಾ ಮಾಮ್ ||

ತಾ॥ ನಾರೀಜನರಿಗೂ ಅಸುರರಿಗೂ ರಾಕ್ಷಸರಿಗೂ ನಿವಾಸಸ್ಥಲವೆಂಬಂತೆ ಪ್ರಕಾಶಿಸುವ ಮಕರರೂಪಿಗಳಾದ ಪಲ್ಲವಗಳೋ ಇವು ಎಂಬಂತೆ ಶೇಷಶಾಯಿಯಾದ ಸ್ವಾಮಿಯ ಕುಣ್ಡಲಧರವಾದ ಶ್ರೋತ್ರಗಳು ಕೈಬಿಡದೆ ಸನ್ತತವಾಗಿ ನನ್ನನ್ನು ಹಿಂಸಿಸುತ್ತಿವೆ—ನೋಡಿರಿ.

(೭) ಕಾಣ್ಮಿನ್ಗಳನ್ನೈಯರ್‌ಕಾಳೆನ್ನೈ ಕಾಟ್ಟುಮ್‌ವಕೈ
ಯಱಿಯೇನ್,
ನಾಣ್‌ಮನ್ನು ವೆಣ್‌ತಿಙ್ಗಳ್‌ಕೊಲ್ ನಯನ್ದಾರ್‌ಕಟ್ಕು
ನಚ್ಚಿಲೈಕೊಲ್,
ಶೇಣ್‌ಮನ್ನು ನಾಲ್‌ತಡನ್ದೋಳ್ ಪೆರುಮಾನ್‌ತನ್
ತಿರುನುದಲೇ,
ಕೋಳ್‌ಮನ್ನಿ ಯಾವಿಯಡುಮ್ ಕೊಡಿಯೇನುಯಿರ್
ಕೋಳಿೞೈತ್ತೇ.

ಪ್ರ॥ ಅನ್ನೈಯರ್‌ಕಾಳ್-ಜನನಿಯರೇ, ಕಾಣ್ಮಿನ್ಗಳ್ ಎನ್ನು-(ನನ್ನನ್ನು ಹಿಂಸಿಸುವ ಪ್ರಕಾರಗಳನ್ನು) ನೋಡಿರಿ ಎಂದು, ಕಾಟ್ಟುಮ್‌ವಕೈ-ತೋರಿಸುವ ರೀತಿಯನ್ನು, ಅಱಿಯೇನ್-ತಿಳಿಯೆನು; ನಾಳ್ (ಣ್)-(ಶುಕ್ಲಪಕ್ಷದ ಅಷ್ಟಮೀ) ದಿನದೊಡನೆ, ಮನ್ನು-ಸೇರಿಕೊಂಡು ಪ್ರಕಾಶಿಸುವ, ವೆಳ್ (ಣ್)-ತಿಙ್ಗಳ್‌ಕೊಲ್-ಶುಭ್ರವಾದ ಚನ್ದ್ರನೋ?, ನಯನ್ದಾರ್‌ಕಟ್ಕು-ಆಶೆಪಡುವವರಿಗೆ, ನಚ್ಚು-ಪ್ರೀತಿ ಪಾತ್ರವಾದ, ಇಲೈಕೊಲ್ (ಸುನ್ದರವಾದ) ಎಲೆಯೋ? ಶೇಣ್‌ಮನ್ನು-ದೀರ್ಘವಾಗಿ ಬೆಳೆದು ಸುವೃತ್ತವಾಗಿರುವ, ನಾಲ್‌ತಡಮ್‌ತೋಳ್-ನಾಲ್ಕು ಮಹಾ ಬಾಹುಗಳುಳ್ಳ, ಪೆರುಮಾನ್ ತನ್-ಮಹಾ ಸ್ವಾಮಿಯಾದ ಕೃಷ್ಣನ, ತಿರುನುದಲೇ-ಸುನ್ದರವಾದ ಲಲಾಟವೇ, ಕೋಳ್‌ಮನ್ನಿ-ಬಲವುಳ್ಳ, ಕೊಡಿಯೇನ್-(ಸೌನ್ದರ್ಯವೂ ಬಾಧಕವಾಗುವಂತೆ) ಕ್ರೂರಸ್ವಭಾವವುಳ್ಳ ನನ್ನ, ಉಯಿರ್ - ಪ್ರಾಣವನ್ನು, ಕೋಳ್ ಇೞೈತ್ತು-ಆವರಿಸಿಕೊಂಡು, ಆವಿ-ನನ್ನ ಆತ್ಮವಸ್ತುವನ್ನು, ಅಡುಮ್-ಕ್ಲೇಶಪಡಿಸುತ್ತಿದೆ.

( ಸ-ಗಾ-ರ ॥ )—

ಹೇ ಮಾತರಸ್ಸಪದಿ ಪಶ್ಯತ ಮಾಮಿತೀದಂ
ನೋ ವೇದ್ಮಿ ದರ್ಶಯಿತುಮಿನ್ದ್ರರಹೋ! ಕಿಮೇಷಃ? ।
ಕಿಂ ಪರ್ಣಮೇವ ವಿತತಂ ನು ಚತುರ್ಭುಜಸ್ಯ
ವಿಷ್ಣೋರ್ಲಲಾಟಫಲಕಂ ಕಿಲ ಮಾಂ ಹಿನಸ್ತಿ ॥

ತಾ॥ ಎಲ್ಲೈ ಜನನಿಯರೇ! ನನ್ನ ದುರವಸ್ಥೆಯನ್ನು ನೋಡಿರಿ—ಎಂದು ತೋರಿಸುವ ರೀತಿಯನ್ನೂ ನಾನು ಅರಿಯೆನು. ಶುಭ್ರವಾದ (ನಿಷ್ಕಳಂಕವಾದ) ಚನ್ದ್ರನೋ? ಅಥವಾ ಸುನ್ದರವಾದ ವಿಕಸಿತಪತ್ರವೋ?—ಎಂಬಂತೆ ಚತುರ್ಭುಜನಾದ ಸ್ವಾಮಿಯ ಲಲಾಟವು ಪ್ರಕಾಶಿಸುತ್ತಿದೆ. ಇದು (ಕ್ರೂರಹೃದಯೆಯಾದ) ನನ್ನ ಪ್ರಾಣವನ್ನು ಅವರಿಸಿ ನನ್ನ ಆತ್ಮವಸ್ತುವನ್ನು ಕ್ಲೇಶಪಡಿಸುತ್ತಿದೆ.

(೮) ಕೋಳಿಳೈ ತ್ತಾಮರೈಯುಮ್ ಕೊಡಿಯುಮ್
ಪವಳಮುಮ್ ವಿಲ್ಲುಮ್,
ಕೋಳಿಳೈತ್ತಣ್ ಮುತ್ತಮುಮ್ ತಳಿರುಮ್ ಕುಳಿರ್
ವಾರ್ ಪಿತ್ತೈಯುಮ್,
ಕೋಳಿಳೈಯಾವುಡೈಯ ಕೊೞುಂ ಶೋದಿವಟ್ಟಙ್ಕೊಲ್,
ಕಣ್ಣನ್
ಕೋಳಿಳೈ ವಾಳ್ಮುಕಮಾಯ್ ಕೊಡಿಯೇನುಯಿರ್
ಕೊಳ್ಕಿನ್ರದೇ.

ಪ್ರ॥ ಕೋಳ್–ತನ್ನ ಕಾನ್ತಿಯೇ, ಇಳೈ–ಆಭರಣವಾಗಿ ಉಳ್ಳ, ತಾಮರೈಯುಮ್–ಕಮಲಗಳು, ಕೊಡಿಯುಮ್–ಲತೆಯೂ, ಪವಳಮುಮ್–ಹವಳವೂ, ವಿಲ್ಲುಮ್–ಧನುಸ್ಸೂ, ಕೋಳಿಳೈ–ಕಾನ್ತಿಯೇ ಆಭರಣವಾಗಿ ಉಳ್ಳ, ತಣ್–ಶೀತಳವಾದ, ಮುತ್ತಮುಮ್–ಮುತ್ತುಗಳೋ, ತಳಿರುಮ್–ಪಲ್ಲವಗಳೂ, ಕುಳಿರ್–ತಣ್ಣಗೆ ಇರುವ, ವಾರ್–ರಮ್ಯವಾದ, ಪಿತ್ತೈಯುಮ್ – ಚನ್ದ್ರನೂ—ಇವುಗಳನ್ನೆಲ್ಲಾ, ಕೋಳ್ ಇಳೈ ಆ–ಧರಿಸಿ ಇರೋಣವೇ ತನಗೆ ಆಭರಣವಾಗಿ ಉಳ್ಳ, ಕೊೞುಮ್–ಪೂರ್ಣವಾದ, ಶೋದಿವಟ್ಟಮ್ ಕೊಲ್ – ಜ್ಯೋತಿರ್ಮಣ್ಡಲವೋ, ಕಣ್ಣನ್–ಕೃಷ್ಣನ, ಕೋಳ್ ಇಳೈ–ಪ್ರಕಾಶವೇ ಆಭರಣವಾಗಿ ಉಳ್ಳ, ವಾಳ್–ಉಜ್ಜ್ವಲವಾದ, ಮುಕಮಾಯ್ ಮುಖವಾಗಿ, ಕೊಡಿಯೇನ್ ಉಯಿರ್–ಕ್ರೂರಸ್ವಭಾವವುಳ್ಳ ನನ್ನ ಪ್ರಾಣವನ್ನು, ಕೊಳ್ ಕಿನ್ರದೇ–ಅಪಹರಿಸುತ್ತಿದೆ.

(ಸ–ಗಾ–ರ ‖)—

ಕೃಷ್ಣಸ್ಯ ದಿವ್ಯಮಹಸಾಽಽಶ್ರಿತಮಾನನಂ ಮೇ
ಪ್ರಾಣಾನ್ ಕಿಲಾತ್ತಿ ನಿಜದಿವ್ಯಮಹಃಪ್ರಭಾಭಿಃ |
ಪದ್ಮಪ್ರವಾಳಲತಿಕಾಧನುರಿನ್ದುಮುಕ್ತಾ–
ಶ್ರೀಪಲ್ಲವಾದಿಭಿರಿಹಾಭರಣೈರ್ಜನನ್ಯಃ ! ‖

ತಾ॥ (ಜನನಿಯರೇ!) ತಮ್ಮ ಕಾನ್ತಿಯೇ ಆಭರಣವಾಗಿ ಉಳ್ಳ ಕಮಲ, ಲತೆ, ಹವಳ, ಧನುಸ್ಸು, ಮುತ್ತು, ತಳಿರು, ಚನ್ದ್ರ—ಇವುಗಳನ್ನೆಲ್ಲಾ ಧರಿಸಿರುವ ಪೂರ್ಣಜ್ಯೋತಿರ್ಮಣ್ಡಲವೋ ಎಂಬಂತೆ (ನಾನಾವಯವಗಳಿಂದ ಕೂಡಿ) ದಿವ್ಯ ತೇಜೋ ವಿರಾಜಮಾನವಾದ ಶ್ರೀಕೃಷ್ಣನ ಮುಖವು ನನ್ನ ಪ್ರಾಣವನ್ನು ಅಪಹರಿಸುತ್ತಿದೆ.

(೯) ಕೊಳ್‌ಕಿನ್ಱ ಕೋಳಿರುಳೈ ಚ್ಚುಕಿಲ್‌ನ್ದಿಟ್ಟ ಕೊೞುಂ ಶುರುಳಿಱ್,
ಉಳ್‌ಕೊಣ್ಡ ನೀಲನನ್ನೂಲ್ ತಱೈಕೊಲ್, ಅನ್ಱು ಮಾಯಱ್ಕುೞಲ್,
ವಿಳ್‌ಕಿನ್ಱ ಪೂನ್ತಣ್ಣುೞಾಯ್ ವಿರೈ ನಾಱ ವನ್ದೆನ್ನುಯಿರೈ,
ಕಳ್‌ಕಿನ್ಱ ವಾಱಱಿಯೀರನ್ನೈಮೀರ್ ಕೞಱಾನಿಱ್ಱೀರೇ.

ಪ್ರ॥ ಕೊಳ್‌ಕಿನ್ಱ–ಲೋಕವನ್ನೆಲ್ಲಾ ವ್ಯಾಪಿಸಿರುವ, ಕೋಳ್ ಇರುಳೈ–ಪ್ರಬಲವಾದ ಅನ್ಧಕಾರವನ್ನು, ಶುಕಿಲ್‌ನ್ದಿಟ್ಟ–ಧ್ವಂಸಮಾಡಿದ, ಕೊೞುಮ್ ಶುರುಳ್‌ಱ್–ಸೇರಿಕೊಂಡು ಉಂಡೆಯಾಗಿ ಸುರುಳಿ ಇರುವ, ಉಳ್‌ಕೊಣ್ಡ–ಒಳಗೆ ಸೇರಿರುವ, ನೀಲನಲ್‌ನೂಲ್ – ನೀಲವಾದ ರಮ್ಯತನ್ತುವಿನ, ತಱೈಕೊಲ್–ಉಂಡೆಯೋ; ಅನ್ಱು–ಅಥವಾ, ಮಾಯಱ್–ಕೃಷ್ಣನ, ಕುೞಲ್–ಕೇಶವು, ವಿಳ್‌ಕಿನ್ಱ–ವಿಕಸಿಸುವ, ಪೂಮ್‌ತಣ್‌ತುೞಾಯ್ – ಪುಷ್ಪಗಳಿಂದ ಕೂಡಿ ಶೀತಳವಾದ ತುಳಸಿಯ, ವಿರೈ–ಪರಿಮಳವು, ನಾಱ–ಹರಡಿಕೊಂಡಿರುವಂತೆ, ವನ್ದು–ಬಂದು, ಎನ್ ಉಯಿರೈ–ನನ್ನ ಆತ್ಮವಸ್ತುವನ್ನು, ಕಳ್‌ಕಿನ್ಱ–ಅಪಹರಿಸುವ, ಆಱು–ಪ್ರಕಾರವನ್ನು, ಅಱಿಯೀರ್–(ನೀವು) ತಿಳಿಯಲಾರಿರಿ, ಅನ್ನೈಮೀರ್ ಜನನಿಯರೇ!, ಕೞಱಾನಿಱ್ಱೀರೇ–(ನನ್ನ ಅವಸ್ಥೆಯನ್ನು ತಿಳಿಯದೆ) ನಿನ್ದಿಸಿ ಧಿಕ್ಕರಿಸ ತ್ತೀರಿ.

( ಸ–ಗಾ–ರ ॥ )—

ಗಾಢಾನ್ಧಕಾರ–ನಿಬಿಡಾನ್ತರ–ನೀಲತನ್ತು–
ಸನ್ತಾನ–ನಿರ್ಮಲತತಿಃ ಕಿಮು ಹಾಲಕಾಳಿಃ ।
ಕೃಷ್ಣಸ್ಯ ದಿವ್ಯತುಲಸೀಸುರಭಿರ್ಹರೇನ್ಮಾಂ
ಹೇ ಮಾತರಃ! ಕಿಮಿತಿ ಮಾಂ ಕ್ಷುಭಿತಾಂ ಕುರುಧ್ವೇ ? ॥

ತಾ|| ಗಾಢಾನ್ಧಕಾರವನ್ನೂ ಕೂಡ ತಿರಸ್ಕರಿಸುವಂತಹ ನಿಬಿಡವಾದ ನೀಲ ವರ್ಣವಾದ ನೂಲಿನ ಉಂಡೆಯೋ—ಎಂಬಂತೆ ಇರುವ ಶ್ರೀಕೃಷ್ಣನ ಕೇಶವು ವಿಕಸಿಸುವ ಸಮಯದಲ್ಲಿ ದಿವ್ಯತುಳಸೀ ಕುಸುಮ ಪರಿಮಳವು ಸರ್ವತ್ರವ್ಯಾಪಿಸಿ, ನನ್ನ ಆತ್ಮವನ್ನು ಅಪಹರಿಸುತ್ತಿದೆ. ಈ ಪ್ರಕಾರವನ್ನು ನೀವು ತಿಳಿಯಲಾರಿರಿ, ಜನನಿಯರೇ! ವೃಥಾ (ನನ್ನ ಅವಸ್ಥೆಯನ್ನು ತಿಳಿಯದೆ) ನನ್ನನ್ನು ಧಿಕ್ಕರಿಸುತ್ತೀರಿ.

(೧೦) ನಿಱ್ಱಿ ಮೂಱ್ಱುತ್ತು‌ಳ್ನ್ನಿ ನೆರಿತ್ತಕ್ಕೈಯರಾಯ್

ಎನ್ನೈ ನೀರ್,

ಶುಱ್ಱಿಯುಮ್ ಶೂಳ್ನ್ದುಮ್ ವೈದಿರ್ ಶುಡರ್ಚೋದಿ

ಮಣಿನಿಱಮಾಯ್,

ಮುಱ್ಱ ಇಮ್ಮೂವುಲಕುಮ್ ವಿರಿಕಿನ್ಱ ಶುಡರ್ಮುಡಿಕ್ಕೇ,

ಒಱ್ಱುಮೈಕ್ಕೊಣ್ಡದುಳ್ಳಮ್ ಅನ್ನೈಮೀರ್

ನಶೈಯೆನ್ನುಙ್ಗಳುಕ್ಕೇ.

ಪ್ರ|| ಮುಱ್ಱತ್ತುಳ್-ಅಂಗಳದಲ್ಲಿ, ನಿಱ್ಱಿ ಎನ್ರು-ನಿಲ್ಲುತ್ತೀಯೆ ಎಂದು, ನೆರಿತ್ತ ಕೈಯರಾಯ್-(ಕೋಪದಿಂದ) ನೆಟ್ಟಿಮುರಿದ ಕೈಯುಳ್ಳವರಾಗಿ, ಎನ್ನೈ-ನನ್ನನ್ನು, ನೀರ್-ನೀವು, ಶುಱ್ಱಿಯುಮ್-ಸುತ್ತಿನಿಂತು, ಶೂಳ್ನ್ದುಮ್-ನಾನಾ ವಿಧವಾಗಿ ನಿನ್ದಿಸಿಯೂ, ವೈದಿರ್-ಧಿಕ್ಕರಿಸುತ್ತೀರಿ. ಶುಡರ್ಶೋದಿ-ಪ್ರಕಾಶಮಾನವಾದ ತೇಜಸ್ಸುಳ್ಳ, ಮಣಿನಿಱಮಾಯ್-ರತ್ನಗಳ ಬಣ್ಣವುಳ್ಳದುದಾಗಿ, ಇಮ್ ಮೂವುಲಕು ಮುಱ್ಱವುಮ್-ಈ ಮೂರುಲೋಕಗಳಲ್ಲೆಲ್ಲಾ, ವಿರಿಕಿನ್ಱ-ವ್ಯಾಪಿಸುವ ಶುಡರ್ಮುಡಿಕ್ಕೇ-ಪ್ರಕಾಶಮಾನವಾದ ಕಿರೀಟದಲ್ಲಿ, ಉಳ್ಳಮ್-(ನನ್ನ) ಮನಸ್ಸು, ಒಱ್ಱುಮೈಕ್ಕೊಣ್ಡದು – ಸೇರಿಕೊಂಡಿತು. ಅನ್ನೈಮೀರ್ – ಜನನಿಯರೇ! ನುಙ್ಗಳುಕ್ಕು-(ಹೀಗೆ ನನ್ನನ್ನು ಬಯ್ಯುತ್ತಿರುವ) ನಿಮಗೆ, ನಶೈ – (ನನ್ನಲ್ಲಿ) ಪ್ರೀತಿ ಮಾಡೋಣದರಿಂದ, ಎನ್-ಏನುಫಲ? (ನಿಮ್ಮ ಪ್ರೀತಿಯು ನಿರರ್ಥಕವೆಂದು ಭಾವವು.)

( ಸ–ಗಾ–ರ || )—

ಹೇ ಮಾತರಃ! ಕಿಮಿತಿ ಮಾಂ ಬತ! ನಿನ್ದಥಾದ್ಯ
ಬಾಹ್ಯಾಙ್ಗಣೇ ಽತ್ರ ಕಿಮು ತಿಷ್ಠಸಿ ನಿಸ್ತ್ರಪೇತಿ|
ಜ್ಯೋತಿರ್ಮಯೇಽದ್ಯ ಮಕುಟೇ ಮಣಿವರ್ಣದೀಪ್ರೇ
ಕೃಷ್ಣಸ್ಯ ಭಾತಿಹೃದಯಂ ಮಮ ನಿತ್ಯಸಕ್ತಮ್ ||

ತಾ॥ ಜನನಿಯರೇ! ನೀವು ನನ್ನನ್ನು—ಅಂಗಳದಲ್ಲಿ ನಿಲ್ಲುತ್ತೀಯೆ—ಎಂದು ಆಗ್ರಹದಿಂದ ಕೈನೆಟ್ಟು ಮುರಿದು ಬಯ್ಯುತ್ತೀರಿ. ದಿವ್ಯತೇಜೋಮಯವಾದ ರತ್ನಗಳ ಕಾನ್ತಿಯುಳ್ಳ ಸರ್ವಲೋಕವ್ಯಾಪಿಯಾದ (ನನ್ನ ಸ್ವಾಮಿಯ) ಕಿರೀಟದಲ್ಲಿ ನನ್ನ ಮನಸ್ಸು ಸೇರಿಕೊಂಡಿದೆ. ನೀವು ವೃಥಾ ನನ್ನನ್ನು ಬಯ್ಯುತ್ತೀರಿ. ಆದುದರಿಂದ ನಿಮ್ಮ ಪ್ರೀತಿಯು ನಿಷ್ಫಲವಾದುದಲ್ಲವೇ?

(೧೧) ಕಳ್ಕರಿಯ ಪಿರಮನ್ ಶಿವನಿನ್ದಿರನೆನ್ಱಿವರ್ಕ್ಕುಮ್,
ಕಳ್ಕರಿಯ ಕಣ್ಣನೈಕ್ಕುರುಕೂರ್ಚ್ಚಡಕೋಪನ್ ಶೊನ್ನ,
ಉಳ್ಕಡೈ ಯಾಯಿರತ್ತುಳಿವೈಯುಮೊರುಪತ್ತುಮ್
ವಲ್ಲಾರ್,
ಉಳ್ಕುಡೈ ವಾನವರೋಡುಡನಾಯೆನ್ಱುಮ್ ಮಾಯಾರೇ.

ಪ್ರ॥ ಕಳ್ಕ (=ಕಣ್-ಕ್ಕು)-ಮನುಷ್ಯಾದಿಗಳ ಕಣ್ಣಿಗೆ, ಅರಿಯ–ಗೋಚರವಾಗದ, ಪಿರಮನ್ ಶಿವನ್ ಇನ್ದಿರನ್–ಬ್ರಹ್ಮರುದ್ರೇನ್ದ್ರರು, ಎನ್ಱು ಇವರ್ಕ್ಕುಮ್–ಎಂಬಿವರಿಗೂ, ಕಳ್ಕ ಅರಿಯ–ಕಣ್ಣಿಗೆ ಗೋಚರವಾಗದ, ಕಣ್ಣನೈ–ಕೃಷ್ಣನನ್ನು, ಕುರುಕೂರ್ ಶಡಕೋಪನ್–ಕುರುಕಾಪುರಿಯ ಶಠಾರಿಮುನಿಯು, ಶೊನ್ನ–ಸ್ತುತಿಸಲು ರಚಿಸಿದ, ಉಳ್ಕ ಉಡೈ–ಭಗವದ್ಗುಣಾದಿ ಪ್ರತಿಪಾದಕ ಶಕ್ತಿಯುಳ್ಳ, ಆಯಿರತ್ತುಳ್–ಸಹಸ್ರ ಪದ್ಯಮಾಲೆಯೊಳು, ಇವೈಯುಮ್ ಒರುಪತ್ತುಮ್–ಈ ಅನ್ಯಾದೃಶವಾದ ದಶಕವನ್ನು, ವಲ್ಲಾರ್–ಬಲ್ಲವರು, ಉಳ್ಕ ಉಡೈ–ಭಗವದನುಭವ ಶಕ್ತಿಯುಳ್ಳ, ವಾನವರೋಡು – ಪರಮಪದವಾಸಿಗಳೊಡನೆ, ಎನ್ಱುಮ್ – ಸರ್ವಕಾಲದಲ್ಲೂ, ಉಡನ್ ಆಯ್–ಕೂಡಿ ಇದ್ದು, ಮಾಯಾರ್–ಬಿಡದೆ ಇರುವರು.

( ಸ–ಗಾ–ರ ॥ )—

ನೇತ್ರಾತಿಗೈರ್ವಿಧಿಶಿವೇನ್ದ್ರಮುಖೈಶ್ಚ ದೇವೈ–
ರ್ದೃಶ್ಯೋ ನ ಯಸ್ತಮಿಹ ಕೃಷ್ಣಮಸೌ ಶಠಾರಿಃ।
ಸ್ತೋತುಂ ಸಹಸ್ರಮತನೋತ್ಕುರುಕಾಪುರೇಶಃ!
ಕುರ್ಯಾದಿದಂ ಚ ದಶಕಂ ದಿವಿ ಸೂರಿಸಙ್ಗಮ್ ॥

ತಾ॥ ಮನುಷ್ಯಾದಿಗಳಿಗೆ ಅದೃಶ್ಯರಾದ ಬ್ರಹ್ಮರುದ್ರೇನ್ದ್ರಾದಿ ದೇವತೆಗಳ ಕಣ್ಣಿಗೂ ಗೋಚರವಾಗದೆ ಇರುವ ಶ್ರೀಕೃಷ್ಣನನ್ನು ಕುರುಕಾಪುರಿಯ ಶಠಾರಿ ಮುನಿಯು ಸ್ತೋತ್ರಮಾಡಲು ರಚಿಸಿದ ದಿವ್ಯಶಕ್ತಿಯುಳ್ಳ ಸಹಸ್ರಪದ್ಯಾವಳಿಯಲ್ಲಿ ಈ ದಿವ್ಯತಮವಾದ ದಶಕವನ್ನು ಬಲ್ಲವರು ಭಗವದನುಭವಶಕ್ತಿಯುಳ್ಳ ಪರಮ ಪದವಾಸಿಗಳೊಡನೆ ಸರ್ವಕಾಲದಲ್ಲೂ ಸೇರಿಯೇ (ಬಿಡದೆ) ಇರುವರು.

( ದ್ರ–ಉ–ಸಂ ॥ )—

ತತ್ಪ್ರಾರ್ಥಿತಾನಧಿಗಮೇಽಪಿ ಚ ಭಾವನಾಯಾ
ಭೂಮ್ನಃ ಪುರಸ್ಸ್ಥಿತಮಿವಾನನಮಚ್ಯುತಸ್ಯ ।
ಆಲೋಕಯನ್ನಪಿ ಕರೇಣ ನ ಸಂಸ್ಪೃಶನ್ ಸ
ಪೀಡಾಮವಾಪ ಮಹತೀಮಥ ಸಪ್ತಮೇನ ॥

( ದ್ರ–ಉ–ತಾ–ರ ॥ )—

ದೃಗ್ಭ್ಯಾಂ ಪದ್ಮಾಕೃತಿಭ್ಯಾಮಮರತರುಲತಾನಾಸಿಕಾತೋಽಧರೇಣ
ಭ್ರೂಚಾಪೇನ ಸ್ಮಿತೇನಾಪ್ಯಥ ಮಕರಲಸತ್ಕುಣ್ಡಲಾಭ್ಯಾಂ ವಿಶಿಷ್ಟಃ ।
ಫಾಲೇನಾರ್ಧೇನ್ದುಭಾಸಾ ಽಮಲಮುಖಶಶಿನಾ ನೇತ್ರಶೋಭಾದಿಭಾಜಾ
ಶ್ರೀಮಾನ್ ದೇವಃ ಕಿರೀಟೀ ಸ್ಫುರತಿ ವಿಶದತನುರ್ಭಾತಿ ಚೇತ್ಯಭ್ಯಧಾಯಿ ॥

( ಈ ಸಪ್ತಮದಶಕದ ಸಾರಾಂಶ— )

ಈ ಏಳನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು, ಜನನಿಯರನ್ನೂ ಸಖೀಜನರನ್ನೂ ಕುರಿತು ಆನಾಯಿಕೆಯು ತನ್ನ ವಿರಹ ವೇದನೆಯನ್ನು ವರ್ಣಿಸುತ್ತ, ಕ್ರಮೇಣ ಶ್ರೀಕೃಷ್ಣರೂಪಿಯಾದ ಭಗವನ್ತನ ನೇತ್ರ-ನಾಸಿಕಾ – ಅಧರ–ಭ್ರೂ–ಮನ್ದಹಾಸ–ಶ್ರೋತ್ರ–ಲಲಾಟ–ಮುಖ-ಕೇಶ– ಕಿರೀಟಾದಿಗಳ ದಿವ್ಯಸೌನ್ದರ್ಯಕ್ಕೆ ತಾನು ವಶ್ಯೆಯಾಗಿ ಅತಿಸನ್ತಪ್ತೆಯಾಗಿರುವುದ ರಿಂದ ತನ್ನ ವಿಷಯದಲ್ಲಿ ಅವರ ನಿನ್ದಾವಚನವು ನಿಷ್ಫಲವೆಂದು ತಿಳಿಸುತ್ತಾಳೆ— ಎಂದು ವರ್ಣಿಸಿರುತ್ತಾರೆ.

## ಶ್ರೀಃ

# ಸಪ್ತಮಶತಕದಲ್ಲಿ—ಅಷ್ಟಮದಶಕ.

## (ಮಾಯಾವಾಮನನೇ —)

(ಈ ದಶಕದಲ್ಲಿ—ಶ್ರೀ ಭಗವನ್ತನಿಂದ ಪ್ರದರ್ಶಿತವಾದ ವಿಚಿತ್ರ ವಿಭೂತಿ ಯೋಗವನ್ನು ಶ್ರೀಶಠಾರಿಮುನಿವರ್ಯರು ಅನುಭವಿಸಿ ವರ್ಣಿಸುತ್ತಾರೆ.)

---

(೧) ಮಾಯಾ ವಾಮನನೇ! ಮದುಶೂದಾ! ನೀಯರುಳಾಯ್,
ತೀಯಾಯ್ ನೀರಾಯ್ ನಿಲನಾಯ್ ವಿಶುಮ್ಬಾಯ್
ಕ್ಕಾಲಾಯ್,
ತಾಯಾಯ್ ತನ್ದೈಯಾಯ್ ಮಕ್ಕಳಾಯ್
ಮಱ್ಱುಮಾಯ್ ಮುಱ್ಱುಮಾಯ್,
ನೀಯಾಯ್ ನೀ ನಿನ್ಱವಾಱಿವೈ ಯೆನ್ನ ನಿಯಾಯಙ್ಗಳೇ.

ಪ್ರ॥ ಮಾಯಾ–ಮಾಯಾಚೇಷ್ಟಿತನೇ! ವಾಮನನೇ – ವಾಮನಾವತಾರ ರೂಪಿಯೇ! ಮದುಶೂದಾ–ಮಧುಸೂದನನೇ! ನೀ ಅರುಳಾಯ್–ನೀನೇ ಕೃಪೆ ಮಾಡಬೇಕು, ತೀ ಆಯ್–ಅಗ್ನಿಯಾಗಿ, ನೀರ್ ಆಯ್ – ಜಲವಾಗಿ, ನಿಲಂ ಆಯ್–ಭೂಮಿಯಾಗಿ, ವಿಶುಮ್ಬು ಆಯ್–ಆಕಾಶವಾಗಿ, ಕಾಲ್ ಆಯ್–ವಾಯುವಾಗಿ, ತಾಯ್ ಆಯ್-ತಾಯಿಯಾಗಿ, ತನ್ದೈ ಆಯ್–ತಂದೆಯಾಗಿ, ಮಕ್ಕಳ್ ಆಯ್–ಮಕ್ಕಳಾಗಿ, ಮಱ್ಱುಮ್ ಆಯ್–ಮತ್ತೂ ಇತರರೂ ಆಗಿ, ಮುಱ್ಱುಮ್ ಆಯ್-ಸಮಸ್ತವೂ ಆಗಿ, ನೀ ಆಯ್–ನೀನೇ ಆಗಿ, ನೀ ನಿನ್ಱ–ನೀನು ನಿಂತ, ಇವೈ ಆಱು–ಈ ಪ್ರಕಾರಗಳು, ಎನ್ನ ನಿಯಾಯಙ್ಗಳ್-ಯಾವ ನ್ಯಾಯವಿಧಾನಗಳು?

( ಸ–ಗಾ–ರ ॥ )—

ಮಾಯಾತ್ಮವಾಮನ! ಹರೇ! ಮಧುಸೂದನ! ತ್ವಂ
ಬ್ರೂಹೀಹ ಮೇ! ತ್ವಮಸಿ ವಹ್ನಿ–ಜಲ–ಕ್ಷ್ಮಾತ್ಮಾ।
ಆಕಾಶ–ವಾಯು–ಜನನೀ–ಜನಕ–ಪ್ರಜಾತ್ಮಾ
ಽಪ್ಯನ್ಯಚ್ಚ ಸರ್ವಮಿತಿ ಕೀದೃಗಯಂ ಪ್ರಕಾರಃ ? ॥

ತಾ॥ ಎಲೈ ಮಾಯಾಚೇಷ್ಟಿತನೇ! ವಾಮನನೇ! ಮಧುಸೂದನನೇ! ನೀನೇ ಕೃಪೆಮಾಡಬೇಕು. ನೀನೇ ಪಂಚಭೂತಾತ್ಮಕನಾಗಿಯೂ, ತಾಯಿ, ತಂದೆ, ಮಕ್ಕಳೂ, ಇತರರೂ, ಸಮಸ್ತವೂ ನೀನೇ ಆಗಿ ನಿಂತಿರುವ ಈ ಪ್ರಕಾರಗಳು ಯಾವ ನ್ಯಾಯಗಳೋ? (ಹೀಗೆ ಕಾರಣರೂಪಿಯಾಗಿಯೂ ಕಾರ್ಯರೂಪಿಯಾಗಿಯೂ ನೀನೇ ಸಮಸ್ತ ಜಗದಾತ್ಮಕನಾಗಿ ನಿಂತಿರುವ ಈ ಆಶ್ಚರ್ಯಗಳನ್ನು ನೀನೇ ತಿಳಿದಿರುತ್ತೀಯೆ—ಇದು ಹೇಗೆ? ಈ ರಹಸ್ಯವು ನನಗೆ ತಿಳಿಯದು—ಎಂದು ಭಾವವು.)

(೨) ಅಙ್ಗಣ್ಮಲರ್ ತ್ತಣ್ತುೞಾಯ್ ಮುಡಿಯಚ್ಚುತನೇ
ಯರುಳಾಯ್,
ತಿಙ್ಗಳುಮ್ ಞಾಯಿಱುಮಾಯ್
ಚ್ಚೆೞುಮ್ಪಲ್ಶುಡರಾಯಿರುಳಾಯ್,
ಪೊಙ್ಗು ಪೊೞಿ ಮೞೈಯಾಯ್ ಪುಕೞಾಯ್
ಪ್ಪೞಿಯಾಯ್ ಪಿನ್ನುಮ್ನೀ,
ವೆಙ್ಗಣ್ ವೆಙ್ಕೂಱ್ಱಮುಮಾಯಿವೈಯೆನ್ನ ವಿಶಿತ್ತಿರಮೇ.

ಪ್ರ॥ ಅಮ್-ರಮ್ಯವಾಗ, ಕಳ್-ಮಧುಭರಿತವಾದ, ತಣ್‌ತುೞಾಯ್-ಶೀತಳವಾದ ತುಳಸೀಮಾಲೆಯಿಂದ ಅಲಂಕೃತವಾದ, ಮುಡಿ-ಕೇಶಪಾಶವುಳ್ಳ, ಅಚ್ಚುತನೇ-ಅಚ್ಯುತನೇ, ಅರುಳಾಯ್-ಕೃಪೆಮಾಡು. ತಿಙ್ಗಳುಮ್-ಚನ್ದ್ರನೂ, ಞಾಯಿಱುಮ್ ಆಯ್-ಸೂರ್ಯನೂ ಆಗಿ, ಶೆೞುಮ್-ವಿಲಕ್ಷಣವಾದ, ಪಲ್‌ಶುಡರ್ ಆಯ್-ಅನೇಕ ನಕ್ಷತ್ರಾದಿ ತೇಜೋದ್ರವ್ಯಗಳಾಗಿ, ಇರುಳಾಯ್-ಅನ್ಧಕಾರಮಯವಾದ ರಾತ್ರಿಯಾಗಿ, ಪೊಙ್ಗು-ಸಮೃದ್ಧವಾಗಿ ಬೆಳೆದಿರುವ, ಪೊೞಿ-ಸುರಿಯುವ, ಮೞೈ ಆಯ್- ಮಳೆಯಾಗಿ, ಪುಕೞ್ ಆಯ್-ಕೀರ್ತಿಯಾಗಿ, ಪೞಿ ಆಯ್-ನಿನ್ದೆಯಾಗಿ, ಪಿನ್ನುಮ್-ಮತ್ತೂ, ನೀ-ನೀನೇ, ವೆಙ್ಗಣ್ (ವೆಮ್ ಕಣ್)-ಕ್ರೂರವಾದ ಕಣ್ಣುಗಳುಳ್ಳ, ವೆಮ್-ಕ್ರೂರಸ್ವಭಾವನಾದ, ಕೂಱ್ಱಮುಮ್ ಆಯ್-ಯಮನೂ ಆಗಿ ನಿಂತಿರುವ, ಇವೈ-ಈ ಪ್ರಕಾರಗಳು, ಎನ್ನ ವಿಶಿತ್ತಿರಮೇ-ಎಂತಹ ವಿಚಿತ್ರಗಳೋ!

( ಸ-ಗಾ-ರ ॥ )

ತ್ವಂ ಬ್ರೂಹಿ ಮೇಽಚ್ಯುತ! ಲಸತ್ತುಲಸೀಸ್ರಗಾಢ್ಯ-
ಮೌಳೇ! ಕಿಮಿನ್ದು-ರವಿ-ತಾರಕ-ರಾಜಿರೂಪಃ ।
ತ್ವಂ ಕಿಂ ತಮಶ್ಚ ಭುವಿ ವೃಷ್ಟಿನುತೀ ಚ ನಿನ್ದಾ
ಕ್ರೂರೋ ಯಮಶ್ಚ ಕಿಮಸಿ ತ್ವಮಹೋ! ವಿಚಿತ್ರಮ್ ? ॥

ತಾ॥ ದಿವ್ಯತುಲಸೀಮಾಲಾಲಂಕೃತಮೌಳಿಯೇ! ಅಚ್ಯುತನೇ! ನೀನೇ ಕೃಪೆ ಮಾಡಿ ಹೇಳು ನೀನೇ ಚನ್ದ್ರಸೂರ್ಯ ನಕ್ಷತ್ರಾದಿ ತೇಜೋಮಣ್ಡಲ ರೂಪಿಯಾಗಿಯೂ, ರಾತ್ರಿಯಾಗಿಯೂ, ಮಳೆಯಾಗಿಯೂ, ಕೀರ್ತಿಯಾಗಿಯೂ, ನಿನ್ದೆಯಾಗಿಯೂ ಮತ್ತೂ ಕ್ರೂರಸ್ವಭಾವವುಳ್ಳ ಯಮನಾಗಿಯೂ ನಿಂತಿರುವ ಈ ಪ್ರಕಾರಗಳು ಎಂತಹ ವಿಚಿತ್ರಗಳೋ!

(೩) ಶಿತ್ತಿರತ್ತೇರ್ವಲವಾ ತಿರುಚ್ಚಕ್ಕರತ್ತಾಯರುಳಾಯ್,
ಎತ್ತನೈ ಯೋರುಕಮುಮವೈಯಾಯವಟ್ರುಳ್ಳಿಯಲುಮ್
ಒತ್ತವೊಣ್ ಪಲ್ಪೊರುಳ್ಕಳುಲಪ್ಪಿಲ್ಲನವಾಯ್
ವಿಯವಾಯ್,
ಶಿತ್ತಿರತ್ತಾಯ್ ನಿಟ್ರಿ ನೀ ಯಿವೈಯೆನ್ನ ವಿಡಮಙ್ಗಳೇ

ಪ್ರ॥ ಶಿತ್ತಿರ – ವಿಚಿತ್ರವಾದ, ತೇರ್ವಲವಾ – ರಥವನ್ನು ನಡೆಸುವುದರಲ್ಲಿ ಸಮರ್ಥನೇ!, ತಿರು ಶಕ್ಕರತ್ತಾಯ್ - ಶ್ರೀಚಕ್ರಾಯುಧವನ್ನು ಧರಿಸಿರುವವನೇ! ಅರುಳಾಯ್ – ಕೃಪೆಮಾಡು, ಎತ್ತನೈ – ಎಷ್ಟು, ಓರ್ – ಅದ್ವಿತೀಯವಾದ, ಉಕಮುಮ್–ಯುಗಗಳೂ, ಅವೈಯಾಯ್ ಅವುಗಳೇ ಮೂರ್ತಿಯಾಗಿಯುಳ್ಳವನಾಗಿ, ಅವಟ್ರುಳ್–ಅವುಗಳೊಳಗೆ, ಇಯಲುಮ್–ನಡೆಯುವ, ಒತ್ತ–(ಜ್ಞಾನಸ್ವರೂಪದಿಂದ) ಸಮವಾದ, ಒಣ್-(ಸ್ವಯಂಪ್ರಕಾಶತ್ವಾದಿ) ಗುಣವೈಲಕ್ಷಣ್ಯವುಳ್ಳ, ಪಲ್–ಅನೇಕವಿಧ ಭೇದಗಳುಳ್ಳ, ಉಲಪ್ಪಿಲ್ಲನ–ಅಸಂಖ್ಯಾತವಾದ, ಪೊರುಳ್ಕಳ್ ಆಯ್–ಪದಾರ್ಥಗಳಾಗಿ (ಅವುಗಳಿಗೆ ಶರೀರಿಯಾಗಿ), ವಿಯವು ಆಯ್–ಅವುಗಳ ಪರಸ್ಪರಭೇದಗಳಿಗೆ ನಿರ್ವಾಹಕನಾಗಿ, ಶಿತ್ತಿರತ್ತಾಯ್–(ಅವುಗಳ ದೋಷಗಳಿಂದ ಅಸಂಸ್ಪೃಷ್ಟನಾಗಿ) ವಿಸ್ಮಯಕರನಾಗಿ, ನೀ ನಿಟ್ರಿ–ನೀನು ನಿಂತಿದ್ದೀಯೆ. ಇವೈ–ಇವುಗಳು, ಎನ್ನ ವಿಡಮಙ್ಗಳೇ ಎಂತಹ ವಿಷಮಗಳಾದ ಕೃತ್ಯಗಳು?

( ಸ-ಗಾ-ರ ॥ )—

ಸಾರಥ್ಯವೇಷಧರ! ಚಕ್ರಧರ! ತ್ವಮೇವ
ಬ್ರೂಹೀಹ ಮೇ ಯುಗಯುಗೇಷ್ವಪಿ ತತ್ಸ್ವರೂಪಃ।
ತತ್ತದ್ಭವಾಖಿಲ–ಶಮಾನ–ಚರಾಚರಾತ್ಮಾ
ನಾನಾವಿಧೋಽಸಿ ಚ ಕಥಂ ವಿಷಮಾ ವಿಚಿತ್ರಾಃ॥

ತಾ॥ ವಿಚಿತ್ರವಾದ ರಥವನ್ನು ನಡೆಸುವ ಚತುರನೇ! ಚಕ್ರಪಾಣಿಯೇ ನೀನೇ ಕೃಪೆಮಾಡಿ ಹೇಳು. ಸಕಲ ಯುಗಗಳಿಗೂ ನಿರ್ವಾಹಕನಾಗಿ, ಕಾಲಾ

ಧೀಶ್ವರನಾಗಿ, ಅನೇಕ ಚಿದಚಿದಾತ್ಮಕವಸ್ತುಗಳಿಗೆ ಶರೀರಿಯಾಗಿ, ಅವುಗಳ ಪರಸ್ಪರ ಭೇದಗಳಿಗೆ ಕಾರಣಭೂತನಾಗಿ, ಅವುಗಳ ದೋಷಗಳಿಂದ ಅಸಂಸ್ಪೃಷ್ಟನಾಗಿ ಅತ್ಯಂತ ವಿಸ್ಮಯಕರನಾಗಿ ನೀನೇ ನಿಂತು ಇದ್ದೀಯೆ. ಇವುಗಳೆಲ್ಲಾ ಎಂತಹ ವಿಷಮಕೃತ್ಯಗಳು? (ಈ ಕೃತ್ಯಗಳ ವೈಷಮ್ಯದ ವಿವರವನ್ನು ನೀನೇ ನಮಗೆ ತಿಳಿಸಬೇಕೆಂದು ಭಾವವು.)

(೪) ಕಳ್ಳವಿಳ್ ತಾಮರೈಕ್ಕಣ್ ಕಣ್ಣನೇ ಯೆನಕ್ಕೊನ್ಱರುಳಾಯ್,
ಉಳ್ಳದುಮಿಲ್ಲದುಮಾಯುಲಪ್ಪಿಲನವಾಯ್ ವಿಯವಾಯ್,
ವೆಳ್ಳತ್ತಡಙ್ಗಡಲುಳ್ ವಿಡನಾಕಣೈಮೇಲ್ ಮರುವಿ,
ಉಳ್ಳಪ್ಪಲ್ ಯೋಕುಶೆಯ್‌ದಿ ಯಿವ್ವೈಯೆನ್ನ ವುಪಾಯಙ್ಗಳೇ.

ಪ್ರ॥ ಕಳ್ ಅವಿಳ್ – ಮಧುವಿನೊಡನೆಕೂಡಿ ವಿಕಸಿಸುವ, ತಾಮರೈಕ್ಕಣ್– ತಾವರೆ ಹೂವುಗಳಂತೆ ನೇತ್ರಗಳುಳ್ಳ, ಕಣ್ಣನೇ–ಶ್ರೀಕೃಷ್ಣನೇ! ಎನಕ್ಕು–ನನಗೆ, ಒನ್ಱು ಅರುಳಾಯ್ – ಒಂದು ಮಾತನ್ನು ಕೃಪೆಯೊಡನೆಹೇಳು. ಉಳ್ಳದುಮ್ – ಇರುವ ವಸ್ತುವೂ, ಇಲ್ಲದುಮ್–ಇಲ್ಲದುದೂ, ಆಯ್–ಆಗಿ, ಉಲಪ್ಪು ಇಲ್ಲನ ಆಯ್–ಅಸಂಖ್ಯಾತವಾಗಿ, ವಿಯವು ಆಯ್–ಭೇದಗಳುಳ್ಳದುದಾಗಿ, ವೆಳ್ಳಮ್– ಪೂರ್ಣವಾದ, ತಡಮ್ ಕಡಲುಳ್ – ವಿಶಾಲವಾದ ಸಮುದ್ರದಲ್ಲಿ, ವಿಡಮ್– ವಿಷವುಳ್ಳ, ನಾಕಣೈಮೇಲ್–ಸರ್ಪರೂಪಿಯಾದ ಶಯನದಮೇಲೆ, ಮರುವಿ–ಸೇರಿ, ಉಳ್ಳಮ್–ಹೃದಯದಲ್ಲಿ, ಪಲ್‌ಯೋಕು–ಅನೇಕವಿಧವಾದ ರಕ್ಷಣಸಂಕಲ್ಪಗಳನ್ನು, ಶೆಯ್‌ದಿ–ಮಾಡಿರುತ್ತೀಯೆ. ಇವ್ವೈ–ಇವುಗಳು, ಎನ್ನ ಉಪಾಯಙ್ಗಳೇ–ಯಾವ ಉಪಾಯಗಳೋ!

(ಸ-ಗಾ-ರ॥)—

ಪದ್ಮಾಕ್ಷ! ಕೃಷ್ಣ! ವದ ಕಿಞ್ಚಿದಿದಂ ಹರೇ! ಮೇ
ಸನ್ತೋಽಪ್ಯಸನ್ತ ಇಹ ಭಾತಿ ಭವಾನನನ್ತಾಃ।
ನಾನಾವಿಧೋಽಸಿ ಚ ವಿಶಾಲಪಯೋಧಿಮಧ್ಯೇ
ಶೇಷೇ ಶಯಾನ ಇತಿ ಯೋಗವಿಧಿಃ ಕಥಂ ತೇ?॥

ತಾ॥ ಮಧುಸ್ಯನ್ದಿಯಾದ ತಾವರೆಯಂತೆ ನೇತ್ರಗಳುಳ್ಳ ಕೃಷ್ಣನೇ! ನನಗೆ ಒಂದು ಮಾತನ್ನು ಕೃಪೆಯಿಂದ ಹೇಳು. ನೀನೇ ಸದಸದ್ವಸ್ತ್ವಾತ್ಮಕನಾಗಿಯೂ, ಅಸಂಖ್ಯಾತವಾಗಿ ಭೇದವಿಶಿಷ್ಟನಾಗಿಯೂ, ಪೂರ್ಣವಾದ ಸಮುದ್ರದಲ್ಲಿ ಶೇಷಶಾಯಿಯಾಗಿ ಅನೇಕವಿಧರಕ್ಷಣಸಂಕಲ್ಪಗಳನ್ನು ಮಾಡುತ್ತೀಯೆ. ಇವುಗಳು ಯಾವ ಉಪಾಯಗಳೋ!

(೫) ಪಾಶಙ್ಗಳ್ ನೀಕ್ಕಿ ಯೆನ್ನೈ ಯುನಕ್ಕೇ
ಯಱಕ್ಕೊಣ್ಡಿಟ್ಟು ನೀ,
ವಾಶಮಲರ್ ತ್ತಣ್ಡುೞಾಯ್‌ಮುಡಿ ಮಾಯವನೇ
ಯರುಳಾಯ್,
ಕಾಯಮುಮ್ ಶೀವನುಮಾಯ್ ಕೞಿವಾಯ್
ಪ್ಪಿಱಪ್ಪಾಯ್ ಪ್ಪಿನ್ನುಮ್ ನೀ,
ಮಾಯಙ್ಗಳ್ ಶೆಯ್‌ದು ವೈತ್ತಿ ಯಿವೈಯೆನ್ನ
ಮಯಕ್ಕುಕ್ಕಳೇ.

ಪ್ರ॥ ಎನ್ನೈ-ನನ್ನನ್ನು, ಪಾಶಙ್ಗಳ್ ನೀಕ್ಕಿ-ಬಾಹ್ಯವಿಷಯಗಳೆಂಬ ಪಾಶಗಳನ್ನು ಧ್ವಂಸಮಾಡಿ, ಉನಕ್ಕೇ ಅಱ - ನಿನಗೋಸ್ಕರವೇ ಹುಟ್ಟಿ ಅನನ್ಯಶರಣನಾಗಿದೇನೆಂದು, ಕೊಣ್ಡಿಟ್ಟು-ಅಂಗೀಕರಿಸಿ, ವಾಶಮಲರ್-ಪರಿಮಳಭರಿತವಾದ ಪುಷ್ಪಗಳುಳ್ಳ, ತಣ್‌ತ್ತುೞಾಯ್-ಶೀತಳವಾದ ತುಳಸೀಮಾಲೆಯನ್ನು ಧರಿಸಿರುವ, ಮುಡಿ-ಕೇಶಪಾಶವುಳ್ಳ, ಮಾಯವನೇ-ಮಾಯಾಚೇಷ್ಟಿತನೇ, ನೀ ಅರುಳಾಯ್-ನೀನೇ ಕೃಪೆಮಾಡಿ ಹೇಳು. ಕಾಯಮುಮ್ - ಶರೀರವೂ, ಶೀವನುಮ್ - ಜೀವಾತ್ಮನೂ, ಆಯ್-ಆಗಿ, ಕೞಿವು ಆಯ್-ಮರಣವೂ ಆಗಿ, ಪಿಱಪ್ಪು ಆಯ್-ಜನನವೂ ಆಗಿ, ಪಿನ್ನುಮ್-ಮತ್ತೂ, ನೀ-ನೀನು, ಮಾಯಙ್ಗಳ್‌ಶೆಯ್‌ದುವೈತ್ತಿ-(ಅವಿದ್ಯಾ-ಕರ್ಮ-ವಾಸನಾ-ರುಚಿಗಳೆಂಬ) ವಂಚನ ಸಾಮಗ್ರಿಗಳನ್ನು ಮಾಡಿ ಇಟ್ಟು ಇರುತ್ತೀಯೆ. ಇವೈ-ಇವುಗಳು, ಎನ್ನಮಯಕ್ಕುಕ್ಕಳ್-ಎಂತಹ ಭ್ರಮಜನಕ ವ್ಯಾಪಾರಗಳು!

( ಸ-ಗಾ-ರ ॥ )—

ಪಾಶಾನ್ ವಿಮೋಚ್ಯ ಮಮ ದಾಸ್ಯಸುಖಾವಹಸ್ತ್ವಂ
ಮಾಯಿನ್! ವದಾದ್ಯ ತುಲಸೀಕುಸುಮಾಢ್ಯಮೌಳೇ! ।
ಕಾಯೋಽಪಿ ಜೀವ ಇಹ ಭಾಸಿ ಮೃತಿಶ್ಚ ಜನ್ಮ
ಮಾಯಾಮಯೋಽಸಿ ಕಿಮು ಮೋಹಪರಮ್ಪರೇಯಮ್? ॥

ತಾ॥ ನನ್ನ ಪಾಶಗಳನ್ನೆಲ್ಲಾ ಧ್ವಂಸಮಾಡಿ ನನಗೆ ನಿನ್ನ ದಾಸ್ಯಸುಖವನ್ನೇ ಅನುಗ್ರಹಿಸಿ, ದಿವ್ಯತುಲಸೀಮಾಲಾಲಂಕೃತಕೇಶನಾಗಿ ಮಾಯಾಚೇಷ್ಟಿತನಾಗಿರುವ ನೀನೇ ನನಗೆ ಒಂದುಮಾತನ್ನು ಹೇಳು. ದೇಹ - ಆತ್ಮಾ - ಮರಣ-ಜನನ-ಇತ್ಯಾದ್ಯನೇಕ ಮಾಯಾಸಾಮಗ್ರಿಗಳನ್ನೆಲ್ಲಾ ಸೃಷ್ಟಿಮಾಡಿ ಇಟ್ಟು ಇರುತ್ತೀಯೆ. ಇವುಗಳೆಲ್ಲಾ ಎಂತಹ ಭ್ರಾನ್ತಿಜನಕವಾದ ವ್ಯಾಪಾರಗಳು!!!

(೭) ಮಯಕ್ಕಾ ವಾಮನನೇ! ಮದಿಯಾಮ್
ವಣ್ಣಮೊರುರೈಯಾಯ್
ಅಯರ್‌ಪ್ಪಾಯ್ ತ್ತೇಱ್ಱಮುಮಾಯ್ಳಲಾಯ್
ಕ್ಕುಳಿರಾಯ್ ವಿಯವಾಯ್,
ವಿಯಪ್ಪಾಯ್ ವೆನ್ಱಿಕಳಾಯ್ ವಿನೈಯಾಯ್
ಪ್ಪಯನಾಯ್ ಪ್ಪಿನ್ನುಮ್ ನೀ,
ತುಯಕ್ಕಾ ನೀ ನಿನ್ಱವಾಱಿವೈಯೆನ್ನ ತುಯರಙ್ಗಳೇ.

ಪ್ರ॥ ಮಯಕ್ಕಾ – ಎಲ್ಲರಿಗೂ ಭ್ರಾನ್ತಿಯನ್ನು ಉಂಟುಮಾಡುವವನೇ! ವಾಮನನೇ – ವಾಮನರೂಪಿಯಾದವನೇ! ಮದಿ ಆಮ್‌ವಣ್ಣಮ್‌–(ನಮಗೆ) ಜ್ಞಾನವು ಉಂಟಾಗುವಂತೆ, ಒನ್ಱು ಉರೈಯಾಯ್ – ಒಂದು ಮಾತನ್ನು ಹೇಳು. ಅಯರ್‌ಪ್ಪು ಆಯ್‌–ವಿಸ್ಮೃತಿಯೂ ಆಗಿ, ತೇಱ್ಱಮುಮ್ ಆಯ್‌–ವಿಶದಜ್ಞಾನವೂ ಆಗಿ, ಅೞಲ್ ಆಯ್‌–ಉಷ್ಣವಾಗಿ, ಕುಳಿರ್ ಆಯ್‌·ಶೀತವಾಗಿ, ವಿಯವು ಆಯ್‌–(ವಿಸ್ಮಯವೂ ಆಗಿ) ಪರಸ್ಪರ ಭೇದವಾಗಿ, ವಿಯಪ್ಪು ಆಯ್‌–ವಿಸ್ಮಯಜನಕನಾಗಿ, ವೆನ್ಱಿಕಳ್ ಆಯ್‌–ಜಯಸಿದ್ಧಿಗಳೂ ಆಗಿ, ವಿನೈ ಆಯ್ – ಪುಣ್ಯಪಾಪರೂಪ ಕರ್ಮಗಳಾಗಿ, ಪಯನ್ ಆಯ್‌–ಅವುಗಳ ಫಲಗಳೂ ಆಗಿ, ಪಿನ್ನುಮ್‌–ಮತ್ತೂ, ನೀ ತುಯಕ್ಕು ಆ–ನೀನೇ ಚೇತನರ ಭ್ರಮವೂ ಆಗಿ, ನೀ ನಿನ್ಱ ಆಱು–ನೀನು ನಿಂತು ಇರುವ ಪ್ರಕಾರಗಳೆಂಬ, ಇವೈ - ಇವುಗಳು, ಎನ್ನ ತುಯರಙ್ಗಳೇ - (ಜಗತ್ತಿಗೆ) ಎಂತಹ ಕ್ಲೇಶಗಳಾಗಿವೆ!

( ಸ–ಗಾ–ರ ॥ )—

ಹೇ! ವಾಮನ! ತ್ವಮಸಿ ಮೋಹಕರೋ ವದಾದ್ಯ
ವೇದ್ಯಂ ಮಮ ಭ್ರಮಹರಂ ನನು ವಿಸ್ಮೃತಿಸ್ತ್ವಮ್ ।
ಜ್ಞಾನಂ ಕಿಲೋಷ್ಣಮಪಿ ಶೀತಮಹೋ! ವಿಚಿತ್ರಂ
ನಾನಾಜಯಸ್ಸುಕೃತ–ದುಷ್ಕೃತ–ತತ್ಫಲಾದಿಃ ॥

ತಾ॥ ಸರ್ವಮೋಹಜನಕನಾದ ವಾಮನನೇ! ನಮಗೆ ಜ್ಞಾನೋದಯವುಂಟಾಗುವಂತೆ ಒಂದು ಮಾತನ್ನು ಹೇಳು. ವಿಸ್ಮೃತಿಯೂ, ವಿಶದಜ್ಞಾನವೂ, ಉಷ್ಣವೂ, ಶೀತವೂ, ವಿಸ್ಮಯನೀಯವೂ, ವಿಸ್ಮಯವೂ, ಜಯಸಿದ್ಧಿಗಳೂ, ಪುಣ್ಯ

ಪಾಪಕರ್ಮಗಳೂ, ಅವುಗಳ ಫಲಗಳೂ—ಎಲ್ಲವೂ ನೀನೇ ಆಗಿ ಚೇತನರಿಗೆಲ್ಲಾ ಭ್ರಮವೂ ನೀನೇ ಆಗಿ ನಿಂತಿರುತ್ತೀಯೆ. ಇವುಗಳೆಲ್ಲಾ ಜಗತ್ತಿಗೆ ಎಂತಹ ಕ್ಲೇಶಗಳಾಗಿ ತೋರುತ್ತಿವೆ!!

(೭) ತುಯರಙ್ಗಳ್ ಶೆಯ್ಯುಮ್ ಕಣ್ಣಾ ಶುಡರ್
ನೀಳ್ಮುಡಿಯಾಯರುಳಾಯ್,
ತುಯರಮ್ ಶೆಯ್ ಮಾನಙ್ಗಳಾಯ್ ಮದನಾಕಿ
ಯುಕವೈಕಳಾಯ್,
ತುಯರಮ್ ಶೆಯ್ ಕಾಮಙ್ಗಳಾಯ್ ತುಲೈಯಾಯ್
ನಿಲೈಯಾಯ್ ನಡೈಯಾಯ್,
ತುಯರಙ್ಗಳ್ ಶೆಯ್ದುವೈತ್ತಿ ಯಿವೈಯೆನ್ನ
ಶುಣ್ಡಾಯಙ್ಗಳೇ.

ಪ್ರ॥ ತುಯರಙ್ಗಳ್ ಶೆಯ್ಯುಮ್-ದುಃಖಗಳನ್ನು ಉಂಟುಮಾಡುವ, ಕಣ್ಣಾ-ಕೃಷ್ಣನೇ! ಶುಡರ್–ಪ್ರಕಾಶವುಳ್ಳ, ನೀಳ್ಮುಡಿಯಾಯ್–ಉನ್ನತವಾದ ಕಿರೀಟವುಳ್ಳವನೇ! ತುಯರಮ್ ಶೆಯ್-ದುಃಖಗಳನ್ನು ಉಂಟುಮಾಡುವ, ಮಾನಙ್ಗಳಾಯ್–ಅಹಂಕಾರ ರೂಪವಾದ ದುರಭಿಮಾನಗಳಾಗಿ, ಮದನಾಯ್–ಮದವಾಗಿ, ಉಕವೈಕಳಾಯ್–ಸನ್ತೋಷಗಳಾಗಿ, ತುಯರಮ್ ಶೆಯ್–ದುಃಖಜನಕವಾದ, ಕಾಮಙ್ಗಳಾಯ್-ಆಶೆಗಳಾಗಿ, ತುಲೈಯಾಯ್–(ವಸ್ತುಗಳ) ಪರಿಮಾಣವಾಗಿ, ನಿಲೈಯಾಯ್–ಸ್ಥಿತಿಯಾಗಿಯೂ, ನಡೈಯಾಯ್ – ಗಮನವಾಗಿಯೂ, (ಹೀಗೆ ಚೇತನರಿಗೆ) ತುಯರಙ್ಗಳ್ ಶೆಯ್ದುವೈತ್ತಿ – (ನೀನು) ದುಃಖಗಳನ್ನು ಉಂಟುಮಾಡಿರುತ್ತೀಯೆ. ಇವೈ–ಇವುಗಳು, ಎನ್ನ ಶುಣ್ಡಾಯಙ್ಗಳ್–ಎಂತಹ (ಸ್ವಾರ್ಥ ಪ್ರವೃತ್ತಿಗಳಾದ) ಲೀಲೆಗಳು? ಅರುಳಾಯ್–ಕೃಪೆಯಿಂದ ಹೇಳು.

( ಸ–ಗಾ–ರ ॥ )—

ದುಃಖಾವಹ! ತ್ವಮಿಹ ಕೃಷ್ಣ! ಸುದೀಪ್ತಮೌಳೇ!
ದುಃಖಾವಹಾಭಿಮತಿ–ಕಾಮ–ಸುಖಾತ್ಮಕೋಽಸಿ।
ದುಃಖಾವಹಾಭಿಲಷಿತಾನಿ ಚರಾಚರಾಣ್ಣ
ಮಾನಂ ತ್ವಮೇವ ವದ ಕೀದೃಗಿಯಂ ತು ಲೀಲಾ?॥

ತಾ|| ದುಃಖಜನಕನಾದ ಕೃಷ್ಣನೇ! ದಿವ್ಯಕಿರೀಟಧಾರಿಯೇ! ದುರಭಿಮಾನ-ಮದ-ಹರ್ಷ-ಕಾಮ-ಪ್ರಮಾಣ-ಸ್ಥಿತಿ – ಗತಿ – ಪ್ರಭೃತಿಗಳಾದ ಕ್ಲೇಶಕರವಾದ ಇವುಗಳನ್ನೆಲ್ಲಾ ನೀನೇ ಉಂಟುಮಾಡಿ ಸಕಲಚೇತನರನ್ನೂ ದುಃಖಪಡಿಸುತ್ತೀಯೆ. ಇವುಗಳೆಲ್ಲಾ ನಿನಗೆ ಎಂತಹ ಲೀಲೆಗಳೋ!

(೮) ಎನ್ನಶುಣ್ಣಾಯಙ್ಗಳಾಲ್ ನಿನ್ಱಿಟ್ಟಾಯೆನ್ನೈ
ಯಾಳುಮ್ ಕಣ್ಣಾ,
ಇನ್ನದೋರ್ ತನ್ಮೈಯೈ ಯೆನ್ಱುನ್ನೈ
ಯಾವರ್ಕ್ಕುಮ್ ತೇಱ್ಱರಿಯೈ,
ಮುನ್ನಿಯ ಮೂವುಲಕುಮವೈಯಾಯವಱ್ಱೈ ಪ್ಪಡೈತ್ತು,
ಪಿನ್ನುಮುಳ್ಳಾಯ್ ಪುಱತ್ತಾಯಿವೈಯೆನ್ನ
ವಿಯಱ್ಕೈಕಳೇ.

ಪ್ರ|| ಎನ್ನ ಶುಣ್ಣಾಯಙ್ಗಳಾಲ್ – ಯಾವ ಲೀಲೆಗಳಿಂದ, ನಿನ್ಱಿಟ್ಟಾಯ್-ನಿಂತಿದ್ದೀಯೆ? ಎನ್ನೈ ಆಳುಮ್ ಕಣ್ಣಾ–ನನ್ನನ್ನು ಆಳುವ ಕೃಷ್ಣನೇ! ಇನ್ನದು-ಈ ಪ್ರಕಾರವಾದ, ಓರ್ ತನ್ಮೈಯೈ ಎನ್ಱು – ಒಂದು ಸ್ವಭಾವವುಳ್ಳವನೆಂದು, ಉನ್ನೈ–ನಿನ್ನನ್ನು, ಯಾವರ್ಕ್ಕುಮ್–ಯಾರಿಗೂ (ಎಲ್ಲರಿಗೂ), ತೇಱ್ಱ–ವಿಶದವಾಗಿ ತಿಳಿಸಲು, ಅರಿಯೈ–ಅಶಕ್ಯನಾಗಿರುತ್ತೀಯೆ. ಮುನ್ನಿಯ–ಅನಾದಿಯಾದ, ಮೂವುಲಕುಮ್–ಮೂರುಲೋಕಗಳನ್ನೂ, ಅವೈಯಾಯ್–ನೀನೇ ಅವುಗಳಾಗಿ, ಅವಱ್ಱೈಪ್ಪಡೈತ್ತು–ಅವುಗಳನ್ನು ಸೃಷ್ಟಿಸಿ, ಪಿನ್ನುಮ್–ಮತ್ತೂ, ಉಳ್ಳಾಯ್-ಅವುಗಳೊಳಗೆ ಅನ್ತಃಪ್ರವಿಷ್ಟನಾಗಿಯೂ ಇರುತ್ತೀಯೆ, ಪುಱತ್ತಾಯ್–ಬಹಿರ್ವ್ಯಾಪ್ತಿಯುಳ್ಳವನಾಗಿಯೂ ಇರುತ್ತೀಯೆ. ಇವೈ–ಇವುಗಳು, ಎನ್ನ ಇಯಱ್ಕೈಕಳೇ–ಎಂತಹ ಸ್ವಾಭಾವಿಕ ವ್ಯಾಪಾರಗಳೋ!

( ಸ–ಗಾ–ರ || )–

ಮನ್ನಾಥ! ಕೃಷ್ಣ! ನನು ಮಾಮಪಿ ಲೀಲಯಾ ತ್ವಂ
ದಾಸಂ ಕರೋಷಿ! ತವ ಗೋಪಯಸಿ ಸ್ವಭಾವಮ್!
ತ್ರೈಲೋಕ್ಯಮೂಲಮಸಿ! ಸೃಷ್ಟಿಕರೋಽಸಿ ಚಾನ್ತ-
ರ್ವ್ಯಾಪೀ ಬಹಿಶ್ಚ! ತವ ಕೀದೃಗಯಂ ಸ್ವಭಾವಃ? ||

ತಾ॥ ಯಾವ ಲೀಲೆಗಳಿಂದ ನಿಂತಿರುತ್ತೀಯೆ? ನನ್ನನ್ನು ನಿನ್ನ ದಾಸ್ಯ ವೃತ್ತಿಯಲ್ಲಿಟ್ಟಿರುವ ಕೃಷ್ಣನೇ! ನಿನ್ನ ಸ್ವಭಾವವು ಇಂತಹುದೆಂದು ಯಾರಿಗೂ ವಿಶದವಾಗಿ ತಿಳಿಸಲಶಕ್ಯನಾಗಿರುತ್ತೀಯೆ. ಸಕಲಲೋಕಗಳೂ ನೀನೇ ಎಂಬಂತೆ ಅವುಗಳನ್ನೆಲ್ಲಾ ಸೃಷ್ಟಿಸಿ, ಅವುಗಳೊಳು ಅನ್ತಃಪ್ರವಿಷ್ಟನಾಗಿಯೂ ಬಹಿರ್ವ್ಯಾಪಿಯಾಗಿಯೂ ಇರುತ್ತೀಯೆ. ಈ ನಿನ್ನ ವ್ಯಾಪಾರಗಳೆಲ್ಲಾ ಎಂತಹ ಸ್ವಭಾವಗಳೋ!

(೯) ಎನ್ನವಿಯತ್ತ್ಯುಕಳಾಲ್ ಎಙ್ಙನೇ ನಿನ್ನಿಟ್ಟಾಯೆನ್ ಕಣ್ಣಾ,
ತುನ್ನು ಕರಶರಣಮ್ ಮುದಲಾಕ ವೆಲ್ಲಾವುೞುಪ್ಪುಮ್,
ಉನ್ನು ಶುವೈಯೊಳಿ ಯೂಱೊಲಿ
ನಾಱ್ಱಮುಮ್ಱ್ಱುಮ್ ನೀಯೇ,
ಉನ್ನೃತ್ತಿ ಯುಣರವುೞಿಲುಲಪ್ಪಿಲ್ಲೈ ನುಣುಕ್ಕಙ್ಙಳೇ.

ಪ್ರ॥ ಎನ್ನ ಇಯತ್ತ್ಯುಕಳಾಲ್–ಎಂತಹ ಸ್ವಭಾವಗಳಿಂದ, ಎಙ್ಙನೇ–ಹೇಗೆ, ನಿನ್ನಿಟ್ಟಾಯ್–ನಿಂತು ಇದ್ದೀಯೆ, 'ಎನ್ ಕಣ್ಣಾ–ನನ್ನ ಕೃಷ್ಣನೇ! ತುನ್ನು–ಶರೀರದಲ್ಲಿ ಸೇರಿಕೊಂಡು ಇರುವ, ಕರಶರಣಮ್ ಮುದಲಾಕ–ಕರಚರಣಗಳೇ ಮೊದಲಾದ, ಎಲ್ಲಾ ಉೞುಪ್ಪುಮ್–ಸಕಲೇನ್ದ್ರಿಯಗಳೂ, ಉನ್ನು–ಮನಸ್ಸಿನೊಡನೆ ಕೂಡಿ ಪ್ರವರ್ತಿಸುವ, (ಶುವೈ–ಒಳಿ–ಊಱು–ಒಲಿ–ನಾಱ್ಱಮ್)—ರಸ-ರೂಪ-ಸ್ಪರ್ಶ-ಶಬ್ದ–ಗನ್ಧಗಳೆಂಬ, ಮುಱ್ಱುಮ್–ಸಕಲ ವಿಷಯಗಳೂ, ನೀಯೇ–ನೀನೇ ಆಗುವಂತೆ, ಉನ್ನೈ–ಅವುಗಳಿಗೆ ಅನ್ತರಾತ್ಮನಾದ ನಿನ್ನನ್ನು, ಉಣರವುೞಿಲ್–ತಿಳಿಯಲು ಅಪೇಕ್ಷಿಸಿದರೆ, ನುಣುಕ್ಕಙ್ಙಳ್–(ನಿನ್ನ) ಸೂಕ್ಷ್ಮರೂಪಗಳಿಗೆ, ಉಲಪ್ಪು ಇಲ್ಲೈ–ಸಂಖ್ಯೆಯೇ ಇಲ್ಲ.

( ಸ–ಗಾ–ರ ॥ )—

ಕೀದೃಕ್ ಸ್ಥಿತೋಽಸಿ ಮಮ ಕೃಷ್ಣ! ಕಥಂ ಸ್ವಭಾವಾತ್
ತ್ವಂ ಹಸ್ತ–ಪಾದ–ಸಕಲೇನ್ದ್ರಿಯ–ರೂಪಧಾರೀ ।
ಶಬ್ದ–ಸ್ಪೃಗಾದಿ–ರಸ–ರೂಪಕ–ಗನ್ಧರೂಪೀ
ಸರ್ವಂ ತ್ವಮೇವ ತವ ಸೂಕ್ಷ್ಮಕಲಾ ಹ್ಯನನ್ತಾಃ ॥

ತಾ॥ ನೀನು ಎಂತಹ ಸ್ವಭಾವಗಳೊಡನೆ ಹೇಗೆ ನಿಂತಿದ್ದೀಯೆ? ಎಲೈ ನನ್ನ ಕೃಷ್ಣನೇ! ಕರಚರಣಾದಿ ಸಕಲೇನ್ದ್ರಿಯಗಳೂ ಮನಸ್ಸಿನೊಡನೆ ಕೂಡಿ ಪ್ರವರ್ತಿಸುವ ಶಬ್ದ ಸ್ಪರ್ಶರೂಪ ರಸ ಗನ್ಧಗಳೆಂಬ ವಿಷಯಗಳೂ ನೀನೇ ಆಗಿರುವಂತೆ, ಅವುಗಳಿಗೆಲ್ಲಾ ಅನ್ತರಾತ್ಮನಾದ ನಿನ್ನನ್ನು ತಿಳಿಯಲು ಅಪೇಕ್ಷಿಸಿದರೆ ನಿನ್ನ ಸೂಕ್ಷ್ಮರೂಪಗಳು ಅಸಂಖ್ಯಾತವಾಗಿವೆ.

(೧೦) ಇಲ್ಲೈ ನುಣುಕ್ಕಙ್ಗಳೇ ಯಿದನಿಲ್
ಪ್ಪಿಱಿದೆನ್ನುಮ್ ವಣ್ಣಮ್,
ತೊಲ್ಲೈ ನನ್ನೂಲಿಲ್ ಶೊನ್ನ
ವುರುವುಮರುವುಮ್ ನೀಯೇ,
ಅಲ್ಲಿ ತ್ತುೞಾಯಲಙ್ಗಲಣಿಮಾರ್ಪ ಎನ್ನಚ್ಚುತನೇ,
ವಲ್ಲದೋರ್ ವಣ್ಣಮ್, ಶೊನ್ನಾಲದುವೇ
ಯುನಕ್ಕಾಮ್ ವಣ್ಣಮೇ.

ಪ್ರ|| ಇದನಿಲ್ ಪಿಱ್ರಿದು–ಇದಕ್ಕಿಂತ ಬೇರೆ, ನುಣುಕ್ಕಙ್ಗಳ್–ಸೂಕ್ಷ್ಮವಸ್ತುಗಳು, ಇಲ್ಲೈ–ಇಲ್ಲ, ಎನ್ನುಮ್ ವಣ್ಣಮ್–ಎಂಬ ಪ್ರಕಾರದಲ್ಲಿ, ತೊಲ್ಲೈ–ಅನಾದಿಯಾದ, ನಲ್–ಅಪೌರುಷೇಯತ್ವಾದಿ ಗುಣಭರಿತವಾದ, ನೂಲಿಲ್–(ವೇದಾದಿ) ಶಾಸ್ತ್ರಗಳಲ್ಲಿ, ಶೊನ್ನ – ಪ್ರತಿಪಾದಿತವಾದ, ಉರುವುಮ್ – ರೂಪಸಹಿತವಾದ ಅಚಿತ್ತೂ, ಅರುವುಮ್ – ರೂಪರಹಿತವಾದ ಚಿತ್ತೂ, ನೀಯೇ–ನೀನೇ ಆಗಿರುತ್ತೀಯೆ. ಅಲ್ಲಿ–ಪುಷ್ಪಗುಚ್ಛಗಳುಳ್ಳ, ತುೞಾಯ್ ಅಲಙ್ಗಲ್ – ತುಳಸೀಮಾಲೆಯನ್ನು, ಅಣಿ–ಅಲಂಕಾರವಾಗಿ ಧರಿಸಿರುವ, ಮಾರ್ಪ – ವಕ್ಷಸ್ಸ್ಥಲವುಳ್ಳವನೇ, ಎನ್ ಅಚ್ಚುತನೇ–ನನ್ನ ಅಚ್ಯುತನೇ, ವಲ್ಲದೋರ್ ವಣ್ಣಮ್–(ಇಂತಹ ನಿನ್ನನ್ನು) ತಿಳಿದಂತೆ ಒಂದು ಪ್ರಕಾರ, ಶೊನ್ನಾಲ್ – (ವೇದಾದಿ ಶಾಸ್ತ್ರಗಳು) ಹೇಳಿದರೆ, ಉನಕ್ಕು – ನಿನಗೆ, ಅದುವೇ–ಅದೇ, ವಣ್ಣಮ್–ತಕ್ಕ ಪ್ರಕಾರವು, ಆಮ್ – ಆಗುವುದು.

( ಸ–ಗಾ–ರ || )—

ಸೂಕ್ಷ್ಮಾನ್ತರಂ ನ ಕಿಲ ಭಾತಿ ತತಃ ಪರಂ ಚೇ–
ತ್ಯೇವಂ ಶ್ರುತಿರ್ವದತಿ ಸಚ್ಚ ಭವಾನಸಚ್ಚ |
ಪುಷ್ಪಾದ್ಯಲಙ್ಕೃತಮುರಸ್ಸ್ಥಲಮಚ್ಯುತಸ್ಯ
ಶ್ರೀಶಸ್ಯ ತೇ! ಶ್ರುತಿಮತೋಽಸ್ತಿ ತವ ಪ್ರಕಾರಃ ||

ತಾ|| ನಿನಗಿಂತ ಬೇರೆ ಸೂಕ್ಷ್ಮವಸ್ತುವು ಇಲ್ಲವೆಂದು ("ಅಣೋರಣೀಯಾನ್"—ಎಂದು ) ಅನಾದಿಯಾದ ಶ್ರುತಿಯಲ್ಲಿ ಪ್ರತಿಪಾದಿತವಾದ ಅಚಿತ್ತೂ ಚಿತ್ತೂ ನೀನೇ ಆಗಿರುತ್ತೀಯೆ. ದಿವ್ಯ ತುಲಸೀಮಾಲಾಲಂಕೃತ ವಕ್ಷಸ್ಸ್ಥಲವುಳ್ಳ ಅಚ್ಯುತನೇ! ಇನ್ತಹ ಅಚಿನ್ತ್ಯಮಹಿಮನಾದ ನಿನ್ನನ್ನು ವೇದಾದಿ ಶಾಸ್ತ್ರಗಳು

ಏನೋ ಒಂದು ಪ್ರಕಾರದಲ್ಲಿ ವರ್ಣಿಸಿದರೆ, ಅದೇ ನಿನಗೆ ಒಂದು ತಕ್ಕ ಪ್ರಕಾರ ವಾಗಿರುವುದು. (ನಿನ್ನ ಮಹಿಮೆಯು ವಾಙ್ಮನಗೋಚರವಾಗಿದ್ದರೂ ನೀನು ಆಶ್ರಿತ ಭವ್ಯನಾಗಿರುತ್ತೀಯೆ—ಎಂದು ಭಾವವು.)

(೧೧) ಆಮ್ ವಣ್ಣಮಿನ್ನದೊನ್ನೆನ್ನಱಿವದರಿಯ ವರಿಯೈ,
ಆಮ್‌ವಣ್ಣತ್ತಾಲ್ ಕುರುಕೂರ್
ಚ್ಚಡಕೋಪನಱಿನ್ದುರೈತ್ತ,
ಆಮ್‌ವಣ್ಣ ವೊಣ್‌ತಮಿಳ್‌ಕಳಿವೈ
ಯಾಯಿರತ್ತುಳಿಪ್ಪತ್ತುಮ್,
ಆಮ್‌ವಣ್ಣತ್ತಾಲುರೈಪ್ಪಾರವ್ವೈನ್ದಾರ್
ತಮಕ್ಕೆನ್ಱೈಕ್ಕುಮೇ.

ಪ್ರ|| ಆಮ್—ಉಂಟಾದ, ವಣ್ಣಮ್—ಪ್ರಕಾರವು, ಇನ್ನದು—ಇಂತಹುದು, ಒನ್ಱು – ಒಂದು, ಎನ್ಱು—ಎಂದು, ಅಱಿವದು ಅರಿಯ – ತಿಳಿಯಲು ಅಶಕ್ಯನಾದ, ಅರಿಯೈ – ಹರಿಯಾದ ಸರ್ವೇಶ್ವರನನ್ನು, ಕುರುಕೂರ್ ಶಡಕೋಪನ್—ಕುರುಕಾ ಪುರಿಯ ಶಠಾರಿಮುನಿಯು, ಆಮ್‌ವಣ್ಣತ್ತಾಲ್—ವಾಸ್ತವ ಸ್ಥಿತಿಯಲ್ಲಿ, ಅಱಿನ್ದು ಉರೈತ್ತ—ತಿಳಿದುಹೇಳಿದ, ವಣ್ಣಮ್—ಛಂದೋರೂಪವಾದ, ಒಣ್ ತಮಿಳ್‌ಕಳ್— ಶ್ಲಾಘ್ಯವಾದ ದ್ರವಿಡಭಾಷಾತ್ಮಕ ಗ್ರಂಥಗಳಾದ, ಇವೈ – ಈ, ಆಯಿರತ್ತುಳ್— ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್—ಈ ದಶಕವನ್ನು, ಆಮ್ ವಣ್ಣತ್ತಾಲ್— ತಮ್ಮ ಇಷ್ಟಪ್ರಕಾರದಲ್ಲಿ, ಉರೈಪ್ಪಾರ್ – ಪಠಿಸಬಲ್ಲವರು, ತಮಕ್ಕು – ತಮ್ಮ ಉಜ್ಜೀವನಕ್ಕೆ, ಎನ್ಱೈಕ್ಕುಮೇ—ಎಂದಿಗೂ, ಅಮೈನ್ದಾರ್—ತಾವೇ ಅನುಕೂಲರಾಗಿ ಕೃತಾರ್ಥರಾಗುವರು.

( ಸ—ಗಾ—ರ || )—

ಸರ್ವೇಶ್ವರಂ ಮತಿವಿದೂರಮಪಿ ಕ್ರಮೇಣ
ನಾನಾಪ್ರಕಾರಕಥನೈಶ್ಚ ಶಠಾರಿಸೂರಿಃ |
ಸ್ತೋತಾ ಸಹಸ್ರಮಕರೋದ್ದ್ರವಿಡಾತ್ಮಕಂ ತತ್!
ಜ್ಞಾತ್ವಾಽಪಿ ಚಾತ್ರ ದಶಕಂ ಫಲಸಿದ್ಧಿಭಾಜಃ ||

ತಾ|| ತಿಳಿಯಲಶಕ್ಯನಾದ ಸರ್ವೇಶ್ವರನನ್ನು ನಾನಾಪ್ರಕಾರಗಳಿಂದ ಶ್ರೀ ಕುರುಕಾಪುರಿಯ ಶಠಾರಿಮುನಿಯು ವರ್ಣಿಸಿ ಸ್ತೋತ್ರಮಾಡಿರುವ ದ್ರಾವಿಡ

ಪ್ರಬನ್ಧಾತ್ಮಕವಾದ ಸಹಸ್ರಪದ್ಯಮಾಲೆಯಲ್ಲಿ ಈ ದಶಕವನ್ನು ಬಲ್ಲವರು ತಮ್ಮ ಉಜ್ಜೀವನಕ್ಕೆ ತಕ್ಕ ಸಾಧನಸಮ್ಪತ್ತಿಯುಳ್ಳವರಾಗಿ ಎಂದಿಗೂ ಭಗವದನುಭವ ದಿಂದ ಕೃತಾರ್ಥರಾಗುವರು.

( ದ್ರ–ಉ–ಸಂ ॥ )—

ಸಙ್ಗಂ ನಿವರ್ತ್ಯ ಮಮ ಸಂಸೃತಿಮಣ್ಡಲೇ ಮಾಂ
ಸಂಸ್ಥಾಪಯನ್ ಕಥಮಸೀತ್ಯನುಚೋದಿತೇನ ।
ಆಶ್ಚರ್ಯಲೋಕಶತನುತಾಮಪಿ ದರ್ಶಯಿತ್ವಾ
ವಿಸ್ಮಾರಿತಃ ಕಿಲ ಶುಚಂ ಹರಿಣಾಽಷ್ಟಮೇನ ॥

(ದ್ರ–ಉ–ತಾ–ರ ॥ )—

ಭೂತೈಶ್ಚನ್ದ್ರಾರ್ಯಮಾದ್ಯೈಸ್ಸಕಲಯುಗಗತೈರ್ವರ್ಣಸ್ತುಭಿಶ್ಚೇತನಾದ್ಯೈ-
ಸ್ಸ್ವೈರ್ಲೋಕಾನಾಂ ನಿಯತ್ಯಾ ಸ್ಮರಣತದಿತರೋತ್ಪಾದನಾನ್ಮಾನನಾದ್ಯೈಃ।
ದುರ್ಜ್ಞೇಯತ್ವಾತ್ಸ್ವಭಾಜಾಂ ಬಹುಶುಭಕರಣಾದ್ವೇದಸಂವೇದ್ಯಭಾವಾ-
ಚ್ಛ್ರೀಮಾನಾಶ್ಚರ್ಯನಾನಾವಿಭವ ಇತಿ ತತಶ್ಶ್ರೀಧರಃ ಪ್ರತ್ಯಪಾದಿ ॥

(ಈ ಅಷ್ಟಮದಶಕದ ಸಾರಾಂಶ)—

ಈ ಎಂಟನೆಯದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ವಿಭೂತಿ ಯೋಗವನ್ನು ಅನುಭವಿಸಲುದ್ಯುಕ್ತರಾಗಿ, ಪಂಚಭೂತಾತ್ಮಕನಾಗಿಯೂ, ಸಕಲ ವಿಧ ಬನ್ಧುವಾಗಿಯೂ, ಚನ್ದ್ರಸೂರ್ಯಾದಿ ತೇಜೋಮಣ್ಡಲರೂಪಿಯಾಗಿಯೂ, ರಾತ್ರಿ–ಮಳೆ–ಕೀರ್ತಿ–ನಿನ್ದೆ–ಯಮ—ಇತ್ಯಾದಿ ರೂಪಿಯಾಗಿಯೂ, ಯುಗಾದಿ ಕಾಲಾತ್ಮಕನಾಗಿಯೂ, ಚಿದಚಿದಾತ್ಮಕಪ್ರಪಂಚಶರೀರಿಯಾಗಿಯೂ, ಸದಸದಾತ್ಮಕ ನಾಗಿಯೂ, ಶೇಷಶಾಯಿಯಾಗಿ ಯೋಗನಿರತನಾಗಿಯೂ, ದೇಹ–ಆತ್ಮ–ಮರಣ–ಜನನ–ಇತ್ಯಾದಿ ಮಾಯಾಜನಕನಾಗಿಯೂ, ವಿಸ್ಮೃತಿ–ಜ್ಞಾನ–ಉಷ್ಣ–ಶೀತ–ವಿಸ್ಮಯನೀಯ–ವಿಸ್ಮಯ–ಜಯಸಿದ್ಧಿ–ಪುಣ್ಯ–ಪಾಪ–ತತ್ಫಲಾದಿ ರೂಪಿಯಾಗಿಯೂ, ದುರಭಿಮಾನ–ಮದ–ಹರ್ಷ–ಕಾಮ–ಪ್ರಮಾಣ–ಸ್ಥಿತಿ–ಗತಿ–ಪ್ರಭೃತಿಗಳಿಗೆಲ್ಲಾ ಕಾರಣಭೂತನಾಗಿಯೂ, ಸಕಲ ಲೋಕಾನ್ತಃ ಪ್ರವಿಷ್ಟನಾಗಿಯೂ, ಬಹಿರ್ವ್ಯಾಪಿ ಯಾಗಿಯೂ, ಸಕಲೇನ್ದ್ರಿಯ ಸಕಲ ವಿಷಯಾತ್ಮಕನಾಗಿಯೂ, ಅತಿಸೂಕ್ಷ್ಮವಾದ ಅಣುರೂಪಿಯಾಗಿಯೂ, ವೇದಾದಿ ಶಾಸ್ತ್ರಪ್ರತಿಪಾದಿತನಾಗಿಯೂ ನೀನೇ ಇರುತ್ತೀಯೆ—ಎಂದು ವರ್ಣಿಸಿ ವಿಸ್ಮಿತರಾಗಿ (ತಮ್ಮ ದುಃಖವನ್ನು ಪರಿಹರಿಸಿ ಕೊಂಡು) ಸನ್ತುಷ್ಟರಾಗಿರುತ್ತಾರೆ.

ಶ್ರೀಃ

# ಸಪ್ತಮಶತಕದಲ್ಲಿ—ನವಮದಶಕ.

(ಎನ್ದ್ರೈಕ್ಕುಮೆನ್ನೈ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನನ್ನು ಕುರಿತು—"ಈ ಲೋಕದಲ್ಲಿ ನನ್ನನ್ನು ಇನ್ನೂ ಏತಕ್ಕೆ ಇಟ್ಟಿರುತ್ತೀಯೆ?"—ಎಂದು ಕೇಳಲು, "ನಿಮ್ಮ ರಮಣೀಯವಾದ ಈ ಪ್ರಬನ್ಧವನ್ನು ನೀವು ಪೂರ್ತಿಮಾಡಬೇಕೆಂದು ಇಟ್ಟಿರುತ್ತೇನೆ" ಎಂದು ಭಗವನ್ತನು ಹೇಳಿ ದಿವ್ಯ ಕವಿತೆಯನು ಮಾಡಿಸಿದುದರಿಂದ, ಶ್ರೀ ಶಠಾರಿಮುನಿವರ್ಯರು ಅತ್ಯನ್ತ ಕೃತಜ್ಞತೆಯೊಡನೆ ಪ್ರತ್ಯುಪಕಾರರೂಪವಾದ ತಮ್ಮ ಕರ್ತವ್ಯಾಂಶವನ್ನು ತಿಳಿಯದೆ ವಿಸ್ಮಿತರಾಗುತ್ತಾರೆ.)

---

(೧) ಎನ್ದ್ರೈಕ್ಕುಮೆನ್ನೈ ಯುಯ್ಯಕ್ಕೊಣ್ಡು ಪೋಕಿಯ,
ಅನ್ದ್ರೈಕ್ಕನ್ದ್ರೆನ್ನೈ ತ್ತನ್ನಾಕ್ಕಿ ಯೆನ್ನಾಲ್ ತನ್ನೈ,
ಇನ್ದಮಿಳ್ ಪ್ಪಾಡಿಯವೀಶನೈ ಯಾದಿಯಾಯ್,
ನಿನ್ದ್ರವೆನ್ ಶೋದಿಯೈ ಯೆನ್ಶೊಲ್ಲಿ ನಿಱ್ಪನೋ.

ಪ್ರ|| ಎನ್ದ್ರೈಕ್ಕುಮ್-ಎಂದಿಗೂ ಆಗುವಂತೆ ಸ್ವೀಕರಿಸಿ, ಪೋಕಿಯ-ನಡೆಯುವ, ಅನ್ದ್ರೈಕ್ಕನ್ದ್ರು-ಎಂದೆಂದಿಗೂ, ಎನ್ನೈ-ನನ್ನನ್ನು, ಉಯ್ಯಕ್ಕೊಣ್ಡು-ಉಜ್ಜೀವಿಸುವಂತೆ ಕಟಾಕ್ಷಿಸಿ, ಎನ್ನೈ-ನನ್ನನ್ನು, ತನ್ನಾಕ್ಕಿ-ತನ್ನವನಾಗಿ ಮಾಡಿಕೊಂಡು, ಎನ್ನಾಲ್-ನನ್ನ ಮೂಲಕ, ತನ್ನೈ-ತನ್ನನ್ನು, ಇನ್ ತಮಿಳ್-ರಮ್ಯವಾದ ದ್ರಾವಿಡ ಪದ್ಯಗಳಿಂದ ಸ್ತೋತ್ರಮಾಡಿಸಿದ, ಈಶನೈ-ಸರ್ವೇಶ್ವರನನ್ನು, ಆದಿ ಆಯ್ ನಿನ್ದ್ರ-ಮೂಲಭೂತನಾಗಿನಿಂತ, ಎನ್ ಶೋದಿಯೈ-ನನ್ನ ಜ್ಯೋತಿರ್ಮಯನನ್ನು, ಎನ್ ಶೊಲ್ಲಿ-ಏನು ಹೇಳಿ (ಹೇಗೆ ವರ್ಣಿಸಿ), ನಿಱ್ಪನ್-ನನ್ನ ಪ್ರಾಣಧಾರಣಮಾಡುವೆನು?

(ಸ-ಗಾ-ರ ||)—

ಸ್ವೀಕೃತ್ಯ ಮಾಂ ಪ್ರಥಮತೋಽಪ್ಯಸಕೃಚ್ಚ ಭೂಮ್ನಾ
ಕೃತ್ವಾ ಸ್ವಕೀಯಮಿಹ ದಿವ್ಯಕವಿತ್ವಸೀಮ್ನಿ |
ಸ್ತೋತುಂ ಸ್ವಮೇವ ಪರಮಂ ಪ್ರಭುಮಾದಿಭೂತಂ
ಜ್ಯೋತಿಃ ಪರಂ ಮಮ ಕಥಂ ಬತ! ವರ್ಣಯಾಮಿ? ||

ತಾ॥ ನನ್ನನ್ನು ನಿತ್ಯದಾಸ್ಯಕ್ಕಾಗಿ ಸ್ವೀಕರಿಸಿ, ಎಂದೆಂದಿಗೂ ನಾನು ಉಜ್ಜೀವಿಸುವಂತೆ ಕಟಾಕ್ಷಿಸಿ, ನನ್ನನ್ನು ವಶಮಾಡಿಕೊಂಡು, ನನ್ನಮೂಲಕ ತನ್ನನ್ನು ದ್ರಾವಿಡಪದ್ಯಗಳಿಂದ ಸ್ತೋತ್ರಮಾಡಿಸಿದ ಸರ್ವೇಶ್ವರನನ್ನು — ನನ್ನ ಆದಿಮೂರ್ತಿಯಾದ ಜ್ಯೋತಿರ್ಮಯನನ್ನು — ಏನೆಂದು ವರ್ಣಿಸಿ ನನ್ನ ಪ್ರಾಣಧಾರಣವಂ ಮಾಡುವೆನು ?

(೨) ಎಞ್ಶೊಲ್ಲಿ ನಿಱ್ಪನೆನ್ನಿನ್ನುಯಿರಿನ್ಱೊನ್ಱಾಯ್,
ಎಞ್ಶೊಲ್ಲಾಲ್ ಯಾಞ್ಶೊನ್ನ ಇಙ್ಕವಿಯೆನ್ಪಿತ್ತು,
ತಞ್ಶೊಲ್ಲಾಲ್ ತಾಙ್ತನ್ನೈಕ್ ಕೀರ್ತ್ತಿತ್ತಮಾಯಙ್, ಎಙ್
ಮುಙ್ಶೊಲ್ಲುಮ್ ಮೂವುರುವಾಂ ಮುದಲ್ವನೇ.

ಪ್ರ॥ ಎನ್–ನನ್ನ, ಇನ್ ಉಯಿರ್ – ವಿಷಯಾನ್ತರಸಕ್ತವಾದ ಜೀವನು, ಇನ್ಱು–ಇಂದು, ಒನ್ಱು ಆಯ್–ಒಂದು ವಸ್ತುವಾಗಿ, ಎನ್–ನನ್ನ, ಶೊಲ್ಲಾಲ್–ವಚನಗಳಿಂದ, ಯಾನ್–ನಾನು, ಶೊನ್ನ–ರಚಿಸಿದ, ಇನ್ ಕವಿ -- ಮಧುರವಾದ ಕವಿತ್ವವು, ಎನ್ ಪಿತ್ತು–ಎಂದು ಲೋಕದ ಜನರಿಂದ ಹೇಳಿಸಿ, ತನ್ ಶೊಲ್ಲಾಲ್–ತನ್ನ ಮಾತುಗಳಿಂದಲೇ, ತಾನ್–ತಾನೇ, ತನ್ನೈ–ತನ್ನನ್ನು, ಕೀರ್ತ್ತಿತ್ತ–ಸ್ತುತಿಸಿದ, ಎನ್ ಮುನ್ ಶೊಲ್ಲುಮ್ – ನನ್ನೊಳು ನಿಂತು ಸಂತೆ ಹೇಳಿಕೊಡುವ, ಮಾಯನ್–ಆಶ್ಚರ್ಯಚೇಷ್ಟಿತನು, ಮೂವುರು ಆಮ್–ತ್ರಿಮೂರ್ತಿಯಾದ, ಮುದಲ್ವನೇ–ಕಾರಣಭೂತನನ್ನು, ಎನ್ ಶೊಲ್ಲಿ–ಏನು ಹೇಳಿ, ನಿಱ್ಪನ್–ಆತ್ಮಧಾರಣವಂ ಮಾಡುವೆನು ?

( ಸ–ಗಾ–ರ ॥ )—

ಯೋ ಮಾಮನುಗ್ರಹವಶಾತ್ ಕವಿತಾಸು ಸಕ್ತಂ
ಕುರ್ವನ್ಮಮೈವ ಕವಿತೇತಿ ಜನಾ ಯಥಾಽಽಹುಃ ।
ಕರ್ತಾ ತಥಾ ಸ್ವಯಮಭೂತ್ ಸ್ವನುತೌ ಪ್ರಸಕ್ತೋ
ಮಾಯೀ! ತ್ರಿಮೂರ್ತಿಮಮುಮದ್ಯ ಕಥಂ ಸ್ತುವೀಮಿ ? ॥

ತಾ॥ ನನ್ನನ್ನು ಇಂದು ಒಂದು ವಸ್ತುವಾಗಿ ಮಾಡಿ, ನನ್ನ ವಚನಗಳಿಂದ ನಾನು ಮಧುರವಾದ ಕವಿತ್ವವಂ ಮಾಡಿದೆನೆಂದು ಜನಗಳು ಹೇಳುವಂತೆ ತನ್ನ ವಚನಗಳಿಂದಲೇ ತಾನೇ ತನ್ನನ್ನು ಸ್ತುತಿಸಿದ ಉಪದೇಶಕರ್ತನಾದ ಮಾಯಾಚೇಷ್ಟಿತನಾದ ತ್ರಿಮೂರ್ತಿ ರೂಪನಾದ ಆದಿಮೂರ್ತಿಯನ್ನು ನಾನು ಯಾವಪ್ರಕಾರದಲ್ಲಿ ವರ್ಣಿಸಿ ಉಜ್ಜೀವಿಸುವೆನು?

(೩) ಆಮುದಲ್ವನಿವನೆನ್ಱು ತಱ್ಱೇಱ್ಱಿ, ಎನ್
ನಾಮುದಲ್ ವನ್ದು ಪುಕುನ್ದು ನಲ್ಲಿನ್ಕವಿ,
ತೂಮುದಲ್ ಪತ್ತರ್ಕ್ಕು ತ್ತಾನ್ ತನ್ನೈ ಚ್ಚೊನ್ನ, ಎನ್
ವಾಯ್ಮುದಲಪ್ಪನೈ ಯೆನ್ಱು ಮಱಪ್ಪನೋ.

ಪ್ರ॥ ಮುದಲ್ವನ್-ಕಾರಣಭೂತನಾದ ತಾನು, ಇವನ್-ಇವನು, ಆಮ್ ಎನ್ಱು-ಕವಿತ್ವವನ್ನು ಮಾಡಲು ಶಕ್ತನೆಂದು, ತಱ್ಱೇಱ್ಱಿ-ತನ್ನನ್ನು ನನ್ನ ಪಕ್ಕದಲ್ಲಿ ವಿಶದಪಡಿಸಿ, ಮುದಲ್-ಮುಂಚೆ, ಎನ್ ನಾ-ನನ್ನ ನಾಲಿಗೆಯಲ್ಲಿ, ವನ್ದು ಪುಕುನ್ದು-ಬಂದು ಪ್ರವೇಶಿಸಿ, ನಲ್-ಶಬ್ದಾರ್ಥವೈಲಕ್ಷಣ್ಯದಿಂದ ಶ್ಲಾಘ್ಯವಾದ, ಇನ್ ಕವಿ-ಮಧುರವಾದ ಕವಿತ್ವವನ್ನು, ತೂಮುದಲ್-ಸತ್ತ್ವಶುದ್ಧಿ ಮೊದಲಾದ, ಪತ್ತರ್ಕ್ಕು-ಭಕ್ತಿಗುಣ ಯೋಗವುಳ್ಳವರಿಗೆ ಅನುಭವ ಯೋಗ್ಯವಾಗುವಂತೆ, ತಾನ್-ತಾನೇ, ತನ್ನೈ-ತನ್ನನ್ನು, ಶೊನ್ನ-ಸ್ತುತಿಸುವಂತೆ ಮಾಡಿದ, ಎನ್ ವಾಯ್-ನನ್ನ ವಾಗ್ವ್ಯಾಪಾರಕ್ಕೆ, ಮುದಲ್-ಕಾರಣಭೂತನಾದ, ಅಪ್ಪನೈ-ಉಪಕಾರಕನಾದ ಸ್ವಾಮಿಯನ್ನು, ಎನ್ಱು-ಎಂದಿಗೆ, ಮಱಪ್ಪನೋ-ಮರೆಯುವೆನು ?

( ಸ–ಗಾ–ರ ॥ )—

ಸೋಽಯಂ ಕವಿರ್ಭವತಿ ಮೇ ಸ್ತುತಿಕೃತ್ ಕಿಲೇತಿ
ಸ್ವಜ್ಞಾನಕೃನ್ಮಮ ಪುರಾ ರಸನಾಂ ಪ್ರವಿಷ್ಟಃ ।
ದಿವ್ಯಂ ಕವಿತ್ವಮಿಹ ಭಕ್ತಜನಾಯ ಕುರ್ವನ್
ಆದ್ಯಸ್ಸ್ವಯಂ ಸ್ವವಿಷಯಂ ! ಕಿಮು ವಿಸ್ಮರೇಯಮ್ ? ॥

ತಾ॥ ಕವಿತ್ವವಂಮಾಡಲು ಇವನು ಶಕ್ತನೆಂದು ತನ್ನನ್ನು ನನಗೆ ವ್ಯಕ್ತಪಡಿಸಿ, ಮುಂಚಿತವಾಗಿ ನನ್ನ ನಾಲಿಗೆಯಲ್ಲಿ ತಾನೇ ಬಂದು ಪ್ರವೇಶಿಸಿ, ದಿವ್ಯವಾದ ಮಧುರ ಕವಿತ್ವವನ್ನು ರಚಿಸಿ, ಸಾತ್ತ್ವಿಕರಾದ ಭಕ್ತರಿಗೆ ಅನುಭಾವ್ಯವಾಗುವಂತೆ, ತಾನೇ ತನ್ನನ್ನು ಸ್ತೋತ್ರಮಾಡಿದ—ನನ್ನ ವಾಗ್ವೃತ್ತಿಗೆ ಕಾರಣಭೂತನಾದ—ಮಹೋಪಕಾರಕನನ್ನು ನಾನು ಎಂದಿಗೆ ಮರೆಯುವೆನು ?

(೪) ಅಪ್ಪನೈ ಯೆನ್ಱು ಮಱಪ್ಪನೆನ್ನಾಕಿಯೇ,
ತಪ್ಪುದಲಿನ್ಱಿ ತ್ತನೈ ಕ್ಕವಿತಾನ್ ಶೊಲ್ಲಿ,
ಒಪ್ಪಿಲಾ ತ್ತೀವಿನೈಯೇನೈ ಯುಯ್ಯಕ್ಕೊಣ್ಡು,
ಶೆಪ್ಪಮೇ ಶೆಯ್ದು ತಿರಿಕಿನ್ಱ ಶೀರ್ಕಣ್ಡೇ.

ಪ್ರ॥ ಎನ್ ಅಣಿಯೇ–ನನ್ನ ಪಕ್ಕದಲ್ಲೇ ಇದ್ದು, ತಪ್ಪುದಲ್ ಇನ್ರಿ–ತಪ್ಪದೇ, ತನ್ನೈ–ತನ್ನನ್ನು, ತಾನ್–ತಾನೇ, ಕವಿಶೊಲ್ಲಿ–ಕವಿತ್ವದಿಂದ ಸ್ತುತಿಸಿ, ಒಪ್ಪು ಇಲಾ–ಸಮಾನರಿಲ್ಲದಂತೆ, ತೀವಿನೈಯೇನ್–ಮಹಾಪಾಪವುಳ್ಳ ನನ್ನನ್ನು, ಉಯ್ಯಕ್ಕೊಣ್ಡು–ಉಜ್ಜೀವಿಸುವಂತೆ ಸ್ವೀಕರಿಸಿ, ಶೆಪ್ಪಮೇ ಶೆಯ್ದು–ಸರಿಯಾಗಿಯೇ ಪರಿಶುದ್ಧನಾಗಿ ಮಾಡಿ, ತಿರಿಕಿನ್ರ–ಸಂಚರಿಸುವ, ಶೀರ್‌ಕಣ್ಣು–ಶೀಲವನ್ನು ನೋಡಿ, ಅಪ್ಪನ್ನೈ–ಇಂತಹ ಉಪಕಾರಕನನ್ನು, ಎನ್ರು ಮಱಪ್ಪೇನ್–ಎಂದಿಗೆ ಮರೆಯುವೆನು ?

( ಸ–ಗಾ–ರ ॥ )—

ಪಾರ್ಶ್ವೇ ಮಮ ಸ್ಥಿತ ಇವಾಂ ಕವಿತಾಂ ಚ ಕುರ್ವನ್
ಸ್ವಸ್ಯ ಸ್ತುತಿಂ ಯ ಇಹ ಮಾಮಪಿ ಪಾಪಶೀಲವಃ ।
ಉಜ್ಜೀವಯನ್ ಗುಣಯುತಂ ಕುರುತೇ ಪರಾತ್ಮಾ
ತಂ ನಾಯಕಂ ಮಮ ಕದಾ ಬತ! ವಿಸ್ಮರೇಯಮ್ ? ॥

ತಾ॥ ನನ್ನ ಪಕ್ಕದಲ್ಲೇ ಇದ್ದು ಒಂದು ತಪ್ಪೂ ಇಲ್ಲದಂತೆ ದಿವ್ಯಕವಿತೆಯಿಂದ ತನ್ನನ್ನು ತಾನೇ ಸ್ತುತಿಸಿ, ಮಹಾಪಾಪಿಯಾದ ನನ್ನನ್ನೂ ಉಜ್ಜೀವಿಸುವಂತೆ ಸ್ವೀಕರಿಸಿ ಪರಿಶುದ್ಧನಾಗುವಂತೆ ಸರಿಮಾಡಿ ಸಂಚರಿಸುವ ಸ್ವಭಾವವುಳ್ಳ, ಮಹೋಪಕಾರಕನಾದ ಸ್ವಾಮಿಯನ್ನು ನಾನು ಎಂದಿಗೆ ಮರೆಯುವೆನು ?

(೫) ಶೀರ್‌ಕಣ್ಡುಕೊಣ್ಡು ತಿರುನ್ದು ನಲ್ಲಿನ್‌ಕವಿ,
ನೇರ್‌ಪಡ ಯಾನ್‌ಶೊಲ್ಲುಮ್ ನೀರ್ಮೈಯಿಲಾಮೈಯಿಲ್,
ಏರ್‌ವಿಲಾವೆನ್ನೈತ್ತನಾಕ್ಕಿ ಯೆನ್ನಾಲ್ ತನ್ನೈ,
ಪಾರ್ ಪರವಿನ್‌ಕವಿ ಪಾಡುಮ್ ಪರಮರೇ.

ಪ್ರ॥ ಶೀರ್‌ಕಣ್ಡು–ತನ್ನ ಗುಣಗಳನ್ನು ಪರಿಶೀಲಿಸಿ, ಕೊಣ್ಡು–ಅನುಸನ್ಧಾನ ಮಾಡಿ, ತಿರುನ್ದು–ಶ್ಲಾಘ್ಯವಾಗಿ ಪರಿಷ್ಕೃತವಾದ, ನಲ್–ಶಬ್ದಾರ್ಥವೈಲಕ್ಷಣ್ಯವುಳ್ಳ, ಇನ್ ಕವಿ–ಮಧುರವಾದ ಕವಿತ್ವವನ್ನು, ನೇರ್‌ಪಡ – ಸಿದ್ಧನಾಗುವಂತೆ, ಯಾನ್ ಶೊಲ್ಲುಮ್–ನಾನು ಹೇಳುವುದಕ್ಕೆ ತಕ್ಕ, ನೀರ್ಮೈ – ಜ್ಞಾನಶಕ್ತ್ಯಾದಿ ಸ್ವಭಾವವು, ಇಲಾಮೈಯಿಲ್–ಇಲ್ಲದೆ ಇರುವುದರಿಂದ, ಏರ್‌ವು ಇಲಾ–ಸಮಾನವಿಲ್ಲದ, ಎನ್ನೈ–ನನ್ನನ್ನು, ತನ್ ಆಕ್ಕಿ–ತನಗೆ ತಕ್ಕಂತೆ ಗುಣಪೂರ್ಣನಾಗಿ ಮಾಡಿ, ಎನ್ನಾಲ್ – ನನ್ನ ಮೂಲಕ, ತನ್ನೈ–ತನ್ನನ್ನು, ಪಾರ್–ಜಗತ್ತೆಲ್ಲಾ, ಪರವು–ಶ್ಲಾಘಿಸುವಂತಹ, ಇನ್‌ಕವಿ ಪಾಡುಮ್–ಮಧುರವಾದ ಕವಿತ್ವದಿಂದ ಸ್ತುತಿಸುವನು, (ಆದುದರಿಂದ) ಪರಮರೇ–(ಅವನು) ಸರ್ವೋತ್ಕೃಷ್ಟನೇ ಆಗಿದಾನೆ.

( ಸ-ಗಾ-ರ ॥ )—

ಸಞ್ಚಿನ್ತ್ಯ ಸದ್ಗುಣಗಣಾನ್ ಮಧುರಂ ಚ ಕಾವ್ಯಂ
ಕರ್ತುಂ ನ ಶಕ್ತಿರಿಹ ಮೇಽಸ್ತಿ ತಥಾಽಪಿ ಗೃಹ್ಣನ್ |
ಮಾಮೇವ ದಿವ್ಯಕವಿತಾಂ ಸ್ವಯಮೇವ ಕುರ್ವನ್
ಮದ್ದ್ವಾರತಸ್ಸ್ವವಿಷಯಾಂ ಪರಮಃ ಪ್ರಭುರ್ಮೇ ॥

ತಾ॥ ಶ್ಲಾಘ್ಯವಾದ ಮಧುರಕವಿತೆಯಿಂದ ಅವನನ್ನು ಅವನ ಗುಣಗಳಿಗೆ ತಕ್ಕಂತೆ ಸ್ತುತಿಸಲು ನನಗೆ ಶಕ್ತಿಯು ಇಲ್ಲದೆ ಇರುವುದರಿಂದ, ನನ್ನನ್ನು ತನಗೆ ತಕ್ಕಂತೆ ಪರಿಷ್ಕರಿಸಿ ನನ್ನ ಮೂಲಕ ತನ್ನನ್ನು ತಾನೇ (ಜಗತ್ತೆಲ್ಲಾ ಶ್ಲಾಘಿಸುವಂತೆ) ಮಧುರಕವಿತೆಯಿಂದ ಅವನು ಸ್ತುತಿಸುವನು. ಇಂತಹ ಸ್ವಭಾವವುಳ್ಳ ಅವನೇ ಪರಮೋತ್ಕೃಷ್ಟನು.

(೬) ಇನ್ಕವಿಪಾಡುಮ್ ಪರಮಕವಿಕಳಾಲ್,
ತನ್ಕವಿತಾನ್ ತನ್ನೈಪ್ ಪಾಡುವಿಯಾದಿನ್ರು,
ನನ್ಗುವನ್ದೆನ್ನುಡನಾಕ್ಕಿ ಯೆನ್ನಾಲ್ ತನ್ನೈ,
ವನ್ಕವಿಪಾಡುಮ್ ವೈಕುನ್ದನಾದನೇ.

ಪ್ರ॥ ಇನ್ಕವಿಪಾಡುಮ್ – ಮಧುರವಾದ ಕವಿತ್ವವನ್ನು ಮಾಡಿ ಹಾಡುವ, ಪರಮಕವಿಕಳಾಲ್–ಶ್ಲಾಘ್ಯರಾದ ಕವಿಗಳಮೂಲಕ, ತನ್ ಕವಿ–ತನಗೆ ತಕ್ಕ ಕವಿತ್ವವನ್ನು ಮಾಡಿಸಿ, ತಾನ್ ತನ್ನೈ–ತಾನೇ ತನ್ನನ್ನು, ಪಾಡುವಿಯಾದು – ಹಾಡಿಸಿಕೊಳ್ಳದೆ, ಇನ್ರು–ಇಂದು, ನನ್ಗುವನ್ದು–ಒಳ್ಳೇ ಸ್ನೇಹಪರನಾಗಿ ಬಂದು, ಎನ್ನುಡನಾಕ್ಕಿ–ಆ ಕವಿತ್ವವನ್ನು ನನ್ನಲ್ಲಿ ಉಂಟುಮಾಡಿ, ಎನ್–ನನ್ನ, ವೈಕುನ್ದನಾದನ್–ವೈಕುಣ್ಠನಾಥನಾದ ಸರ್ವೇಶ್ವರನು, ಎನ್ನಾಲ್–ನನ್ನ ಮೂಲಕ, ತನ್ನೈ–ಅಂತಹ ಮಹಾಮಹಿಮೆಯುಳ್ಳ ತನ್ನನ್ನು, ವನ್ಕವಿಪಾಡುಮ್–ಶ್ಲಾಘ್ಯವಾದ ಕವಿತ್ವದಿಂದ ಸ್ತುತಿಸುವನು.

( ಸ-ಗಾ-ರ ॥ )—

ಸ್ವಸ್ಯ ಸ್ತುತಿಂ ನ ಕಿಲ ಕಾರಯತಿ ಸ್ಮ ಪೂರ್ವಂ
ಶ್ರೀಮಾನಯಂ ಮಧುರದಿವ್ಯಕವೀನ್ದ್ರಮೂಲಾತ್ |
ಅದ್ಯಾಗತೋಽತ್ರ ಕೃಪಯಾ ಮಯಿ ಸನ್ನಿಧಾನಾ-
ದ್ವೈಕುಣ್ಠರಾಟ್ ಕಿಲ ಮಯಾ ಸ್ವನುತಿಂ ತನೋತಿ ॥

ತಾ|| ಮಧುರವಾದ ಕವಿತ್ವವನ್ನು ಮಾಡುವ ಪರಮೋತ್ಕೃಷ್ಟರಾದ ಕವಿಗಳ ಮೂಲಕ ತನ್ನನ್ನು ಹಾಡಿಸಿಕೊಳ್ಳದೆ, ಈಗ ನನ್ನೊಡನೆ ಸ್ನೇಹಪರನಾಗಿ ಬಂದು ಆ ದಿವ್ಯಕವಿತೆಯನ್ನು ನನ್ನಲ್ಲಿ ಉಂಟುಮಾಡಿ, ಸಾಕ್ಷಾದ್ವೈಕುಣ್ಠನಾಥನಾದ ಆ ಸರ್ವೇಶ್ವರನು ತನ್ನ ಮಹಿಮೆಗೆ ತಕ್ಕಂತೆ, ನನ್ನ ಮೂಲಕ (ಶ್ಲಾಘ್ಯವಾದ ನನ್ನ ಕವಿತ್ವದಿಂದ) ತನ್ನನ್ನು ತಾನೇ ಸ್ತುತಿಸುವನು.

(೭) ವೈಕುನ್ದನಾದನ್ ವಲ್ವಿನೈ ಮಾಯ್ನ್ದು ಅ,
ಚ್ಚೆಯಕ್‌ಕುನ್ದನ್ ತನ್ನೈ ಯೆನ್ನಾಕ್ಕಿ ಯೆನ್ನಾಲ್ ತನ್ನೈ,
ವೈಕುನ್ದನಾಕ ಪ್ಪುಕಳ್ ವಣ್ದೀಂಕವಿ,
ಶೆಯ್‌ಕುನ್ದನ್ ತನ್ನೈ ಯೆನ್ನಾಳ್ ಶಿನ್ದಿತ್ತಾರ್ವನೋ.

ಪ್ರ|| ವೈಕುನ್ದನಾದನ್ – ಶ್ರೀ ವೈಕುಣ್ಠನಾಥನು, ಎನ್ ವಲ್ವಿನೈ – ನನ್ನ ಪ್ರಬಲವಾದ ಪಾಪವನ್ನು, ಮಾಯ್ನ್ದು ಅಚ್ಚೆಯ್ – ನಾಶಹೊಂದುವಂತೆ ಮಾಡುವ, ಕುನ್ದನ್ ತನ್ನೈ–ಸ್ವಭಾವವುಳ್ಳ ತನ್ನನ್ನು, ಎನ್ ಆಕ್ಕಿ- ನನ್ನ ವಿಷಯದಲ್ಲಿ ಪ್ರತಿಪಾದ್ಯನಾಗಿ, ಎನ್ನಾಲ್– ನನ್ನ ಮೂಲಕ, ತನ್ನೈ – ಅನ್ಯಾಹ ಪರಾತ್ಪರನಾದ ತನ್ನನ್ನು, ವೈಕುನ್ದನಾಕ–ತನ್ನ ಸರ್ವೇಶ್ವರತ್ವಕ್ಕೆ ಭಂಗವುಂಟಾಗದಂತೆ, ಪುಕಳ್– ಸ್ತೋತ್ರಮಾಡುವಹಾಗೆ, ವಣ್ – ಉದಾರವಾದ, ತೀಮ್‌ಕವಿ – ಮಧುರಕವಿತ್ವ ವನ್ನು, ಶೆಯ್– ಮಾಡಿಸುವಂತಹ, ಕುನ್ದನ್–ಉಪಕಾರಕನಾದ, ತನ್ನೈ–ತನ್ನನ್ನು, ಶಿನ್ದಿತ್ತು – ಚಿನ್ತಿಸಿ ಧ್ಯಾನಮಾಡಿ, ಎನ್ನಾಳ್ – ಯಾವಾಗ, ಆರ್ವನೋ – ತೃಪ್ತಿ ಹೊಂದುವೆನು ?

( ಸ–ಗಾ–ರ || )–

ವೈಕುಣ್ಠನಾಥ ಇಹ ಮೇ ಪ್ರಬಲಾಘಹನ್ತಾ
ಮದ್ದ್ವಾರತಸ್ಸ್ವ ನುತಿಮೇವ ಹಿ ಕರ್ತುಕಾಮಃ |
ದಿವ್ಯಾಂ ಕವಿತ್ವಸರಣಿಂ ಮಯಿ ಸನ್ದಧಾತೀ–
ತ್ಯೇವಂ ವಿಚಿನ್ತ್ಯ ಸುಗುಣಮ್ ಕದಾಽಸ್ಮಿ ತೃಪ್ತಃ ? ||

ತಾ|| ಶ್ರೀವೈಕುಣ್ಠನಾಥನು ನನ್ನ ಪ್ರಬಲವಾದ ಪಾಪವನ್ನು ನಾಶಪಡಿಸು ವಂತಹ ಸ್ವಭಾವವುಳ್ಳ ತನ್ನನ್ನೇ ನಾನು ಸ್ತೋತ್ರಮಾಡುವಂತೆ, ನನ್ನ ಮೂಲಕ ತನ್ನ ಅಪಾರವಾದ ಮಹಿಮೆಗೆ ಭಂಗವುಂಟಾಗದಂತೆ ತನ್ನನ್ನು ತಾನೇ ಉದಾರ ವಾದ ಮಧುರ ಕವಿತ್ವದಿಂದ ಸ್ತೋತ್ರಮಾಡಿ ಮಹೋಪಕಾರಕನಾಗಿರುತ್ತಾನೆ. ಇಂತಹ ಮಹಾಸ್ವಾಮಿಯನ್ನು ಧ್ಯಾನಮಾಡಿ ಚಿನ್ತಿಸಿ ಚಿನ್ತಿಸಿ ನಾನು ಎಂದಿಗೆ ತೃಪ್ತಿಹೊಂದುವೆನು ? (ಎಂದಿಗೂ ತೃಪ್ತಿಯೇ ಉಂಟಾಗಲಾರದೆಂದು ಭಾವವು.)

(೮) ಆರ್ವನೋ ವಾೞಿಯಙ್ಗೈ ಯೆಮ್ಬಿರಾನ್ ಪುಕೞ್,
ಪಾರ್ವಿಣ್ಣೀರ್ ಮುಱ್ಱುಮ್ ಕಲನ್ದು ಪರುಕಿಲುಮ್,
ಏರ್ವಿಲಾವೆನ್ನೈ ತ್ತನ್ನಾಕ್ಕಿ ಯೆನ್ನಾಲ್ ತನ್ನೈ,
ಶೀರ್ಪೆಱ ವಿನ್ಕವಿ ಶೊನ್ನ ತಿಱತ್ತುಕ್ಕೇ.

ಪ್ರ॥ ಏರ್ವು ಇಲಾ – ತಕ್ಕ ಜ್ಞಾನಶಕ್ತ್ಯಾದಿಗಳಿಲ್ಲದ, ಎನ್ನೈ – ನನ್ನನ್ನು, ತನ್ನಾಕ್ಕಿ – ತನ್ನ ವಿಷಯದಲ್ಲಿ ಜ್ಞಾನಾದಿ ಪೂರ್ಣನಾಗುವಂತೆ ಮಾಡಿ, ಎನ್ನಾಲ್– ನನ್ನ ಮೂಲಕ, ತನ್ನೈ–ಪೂರ್ಣನಾದ ತನ್ನನ್ನು, ಶೀರ್ಪೆಱ – ಶೀಲಾದಿಗುಣ ಸಮ್ಪತ್ತಿಯುಂಟಾಗುವಂತೆ, ಇನ್ ಕವಿ ಶೊನ್ನ – ಮಧುರವಾದ ಕವಿತ್ವವನ್ನು ರಚಿಸಿದ, ತಿಱತ್ತುಕ್ಕು – ಪ್ರಕಾರಕ್ಕೆ ತಕ್ಕಂತೆ, ಆೞಿ ಅಙ್ಗೈ– ಚಕ್ರಧಾರಣದಿಂದ ರಮ್ಯವಾದ ಹಸ್ತವನ್ನು ತೋರಿಸಿದ, ಎಮ್ ಪಿರಾನ್ – ನನ್ನಸ್ವಾಮಿಯಾದ ಭಗವನ್ತನ, ಪುಕೞ್–ಕಲ್ಯಾಣಗುಣಗಳನ್ನು, ಪಾರ್ – ಅವತಾರಸ್ಥಲವಾದ ಭೂಮಿಯಲ್ಲೂ, ವಿಣ್ – ಪರಮಪದದಲ್ಲೂ, ನೀರ್–ವ್ಯೂಹಸ್ಥಲವಾದ ಕ್ಷೀರಸಮುದ್ರದಲ್ಲೂ, ಮುಱ್ಱುಮ್ – ವಾಸಮಾಡುವ ಚೇತನರೆಲ್ಲರೊಂದಿಗೂ, ಕಲನ್ದು ಪರುಕಿಲುಮ್ – ಕೂಡಿ ಅನುಭವಿಸಿದರೂ, ಆರ್ವನೋ–(ನಾನು) ತೃಪ್ತಿಹೊಂದುವೆನೋ ?

( ಸ–ಗಾ–ರ ॥ )—

ಅಜ್ಞಂ ಚ ಮಾಂ ಕವಿವರಂ ರಚಯನ್ನುದಾರಾಂ
ದಿವ್ಯಾಂ ಕೃತಿಂ ಸ್ವವಿಷಯಾಂ ಪ್ರಕಟೀಕರೋತಿ ।
ಯಶ್ಚಕ್ರಭೃನ್ಮಮ ವಿಭುಃ ಕಿಲ । ತಸ್ಯ ಕೀರ್ತಿಂ
ಸ್ತೋತುಂ ಪ್ರಭುರ್ನ ಹಿ ಭವೇಯಮನನ್ತಲೋಕೈಃ ॥

ತಾ॥ ಅಜ್ಞನಾದ ನನ್ನನ್ನೂ ಕೂಡ ಜ್ಞಾನವಿಶಿಷ್ಟನಾಗುವಂತೆಮಾಡಿ, ತನ್ನನ್ನು ನನ್ನ ಮೂಲಕ ಮಧುರವಾದ ಕವಿತ್ವದಿಂದ ಸ್ತುತಿಸಿದ ಚಕ್ರಪಾಣಿಯಾದ ಮಹಾಸ್ವಾಮಿಯ ಕಲ್ಯಾಣಗುಣಗಳನ್ನು, ನಾನು ಈ ಭೂಲೋಕದಲ್ಲೂ ಪರಮಪದದಲ್ಲೂ ಕ್ಷೀರಾಬ್ಧಿಯಲ್ಲೂ ವಾಸಮಾಡುವ ಸಕಲ ಚೇತನರೊಡನೆ ಕೂಡಿಯಾದರೂ ಅನುಭವಿಸಿ ತೃಪ್ತಿಹೊಂದುವೆನೋ? (ತೃಪ್ತಿಯೇ ಉಂಟಾಗಲಾರದೆಂದು ತಾತ್ಪರ್ಯ.)

(೯) ತಿಱತ್ತುಕ್ಕೇಯ್ ತುಪ್ಪುರವಾಮ್ ತಿರುಮಾಲಿನ್ ಶೀರ್
ಇಱಪ್ಪೆದಿರ್ ಕಾಲಮ್ ಪರುಕಿಲುಮಾರ್ವನೋ,
ಮಱಪ್ಪಿಲಾವೆನ್ನೈ ತ್ತನ್ನಾಕ್ಕಿ ಯೆನ್ನಾಲ್ ತನ್ನೈ,
ಉಱಪ್ಪಲವಿನ್ ಕವಿ ಶೊನ್ನವುದವಿಕ್ಕೇ.

ಪ್ರ॥ ಮಱಪ್ಪು ಇಲಾ – (ನನ್ನ ವಿಷಯದಲ್ಲಿ) ವಿಸ್ಮೃತಿಯಿಲ್ಲದ, ಎನ್ನೈ– ನನ್ನನ್ನು, ತನ್ ಆಕ್ಕಿ–ತನ್ನ ವಿಷಯದಲ್ಲಿ ಸನ್ತತ ಸ್ಮರಣವುಳ್ಳವನಾಗಿ ಮಾಡಿ, ಎನ್ನಾಲ್ – ನನ್ನಮೂಲಕ, ತನ್ನೈ–ತನ್ನನ್ನು, ಉಱಪ್ಪಲ–ಸದಾ ಸ್ತುತಿಸಲು ಅಸಂಖ್ಯಾತವಾದ, ಇನ್ ಕವಿಸೊನ್ನ – ಮಧುರವಾದ ಕವಿತ್ವವನ್ನು ರಚಿಸಿದ, ಉದವಿಕ್ಕು – ಉಪಕಾರಕ್ಕೆ, ಕೈಮ್ಮಾಱು – ಆಯಾಕಾರ್ಯಪ್ರಕಾರಗಳಿಗೆ, ಏಯ್– ತಕ್ಕಂತಹ, ತುಪ್ಪುರವು ಆಮ್–ಶಕ್ತಿಯುಳ್ಳ, ತಿರುಮಾಲ್ – ಶ್ರಿಯಃಪತಿಯ, ಶೀರ್ – ಔದಾರ್ಯ ಸೌಶೀಲ್ಯ ಸೌಲಭ್ಯಾದಿ ಗುಣಗಳನ್ನು, ಇಱಪ್ಪು ಎದಿರ್ ಕಾಲಮ್–ಭೂತಭವಿಷ್ಯತ್ಕಾಲಗಳಲ್ಲೂ, ಪರುಕಿಲುಮ್–ಅನುಭವಿಸಿದರೂ, ಆರ್ವ ನೇನ್–ತೃಪ್ತಿಹೊಂದುವೆನೋ?

( ಸ–ಗಾ–ರ ॥ )—

ಮಾಂ ಚಾಪಿ ದಿವ್ಯಮತಿಮೇವ ವಿಧಾಯ ಸಾಕ್ಷಾತ್
ಯೋ ಮನ್ಮುಖಾನ್ಮಧುರಸತ್ಕೃತಿಕೃತ್ ಸ್ವನುತ್ಯೈ ।
ತಂ ಸರ್ವಶಕ್ತಮಪಿ ಮಾಧವಮುತ್ತಮಂ ಕಿಂ
ಸ್ತುತ್ವಾ ತ್ರಿಕಾಲಸಮಯೇಷು ಭವಾಮಿ ತೃಪ್ತಃ ? ॥

ತಾ॥ ನನ್ನನ್ನೂಕೂಡ ತನ್ನಲ್ಲಿ ಸನ್ತತ ಸ್ಮರಣವುಳ್ಳವನಾಗಿಮಾಡಿ, ನನ್ನ ಮೂಲಕ ತನ್ನನ್ನು ಅಸಂಖ್ಯಾತವಾದ ಮಧುರಕವಿತ್ವರೂಪವಾದ ಗ್ರನ್ಥಗಳಿಂದ ಸ್ತುತಿಸಿದ ಅವನ ಮಹೋಪಕಾರಕ್ಕೆ ತಕ್ಕಂತೆ, ಅನ್ತಹ ಮಹಾಶಕ್ತಿಯುಳ್ಳ ಶ್ರಿಯಃಪತಿಯಾದ ಭಗವನ್ತನ ಔದಾರ್ಯ ಸೌಶೀಲ್ಯ ಸೌಲಭ್ಯಾದಿ ಗುಣಗಳನ್ನು ನಾನು ತ್ರಿಕಾಲಗಳಲ್ಲೂ ಅನುಭವಿಸಿದರೂ ತೃಪ್ತಿಹೊಂದುವೆನೋ? (ಆಗಲೂ ನನಗೆ ತೃಪ್ತಿಯುಂಟಾಗಲಾರದೆಂದು ಭಾವವು.)

(೧೦) ಉದವಿ ಕ್ಕೈಮ್ಮಾಱು ಉಯಿರೆನ್ನ ವುಱ್ಱೆಣ್ಣಿಲ್,
ಅದುವುಮಱ್ಱಾಙ್ಗವನ್ ತನ್ನದೆನ್ನಾಲ್ ತನ್ನೈತ್
ತುದವಿಯ ವಿನ್ಕವಿಪಾಡಿಯ ವಪ್ಪನುಕ್ಕು,
ಎದುವುಮೊನ್ಱುಮಿಲ್ಲೈ ಶೆಯ್ವದಿಙ್ಗುಮಙ್ಗೇ.

ಪ್ರ॥ ಉದವಿ–(ಅವನುಮಾಡಿದ) ಉಪಕಾರಕ್ಕೆ, ಕೈಮ್ಮಾಱು–ಪ್ರತ್ಯುಪಕಾರವು, ಎನ್ ಉಯಿರ್ ಎನ್ನ–ನನ್ನ ಆತ್ಮಾ ಎಂದು, (ಇದನ್ನು) ಉಱ್ಱು ಎಣ್ಣಿಲ್– ಚೆನ್ನಾಗಿ ಪರಿಶೀಲಿಸಿ ನೋಡಿದರೆ, ಅಙ್ಗು—ಆ ಪ್ರತ್ಯುಪಕಾರಾವಸ್ಥೆಯಲ್ಲಿ, ಅದುವುಮ್–ಆ ಆತ್ಮವಸ್ತುವೂ, ಮಱ್ಱು–ಮತ್ತು, ಅವನ್ ತನ್ನದು–ಅವನದೇ ಆದುದ

ರಿಂದ, ಎನ್ನಾಲ್—ನನ್ನಮೂಲಕ, ತನ್ನೈ-ತನ್ನನ್ನು, ಪದವಿಯ—ಕೋಮಲವಾದ, ಇಞ್ಕವಿ- ಮಧುರ ಕವಿತ್ವವನ್ನು, ಪಾಡಿಯ—ಹಾಡಿದ, ಅಪ್ಪನುಕ್ಕು- ಉಪಕಾರಕನಿಗೆ, ಇಙ್ಗುಮ್ ಅಙ್ಗೇ-ಈ ಲೀಲಾವಿಭೂತಿಯಲ್ಲೂ ಆ ನಿತ್ಯವಿಭೂತಿಯಲ್ಲೂ, ಶೆಯ್‌ವದು – ಕರ್ತವ್ಯಾಂಶವು, ಎದುವುಮ್ – ಯಾವುದೂ, ಒನ್ಱುಮ್—ಒಂದು ಪ್ರತ್ಯುಪಕಾರವೂ, ಇಲ್ಲೈ—ಇಲ್ಲ.

( ಸ-ಗಾ-ರ ॥ )—

ಆತ್ಮಾನಮೇವ ಕೃತವಿನ್ನ ಕಿಮರ್ಪಯಾಮಿ—
ತ್ಯೇವಂ ವಿಚಿನ್ತ್ಯ ಸ ಚ ಭಾತಿ ತದೀಯ ಏವ ।
ಇತ್ಯೇವ ವೇದ್ಮಿ ! ಕವಿತಾಂ ಲಲಿತಾಂ ವಿಧಾತು—
ಸ್ತಸ್ಯೋಪಕಾರ ಕಣಿಕಾಽತ್ರ ನ ಚಾಪರತ್ರ ॥

ತಾ ॥ ಅವನುಮಾಡಿದ ಉಪಕಾರಕ್ಕೆ ನನ್ನ ಆತ್ಮಾರ್ಪಣವೇ ಪ್ರತ್ಯುಪಕಾರವೆಂದು ಚೆನ್ನಾಗಿ ನಿರೂಪಿಸಿನೋಡಿದರೆ, ಆ ಆತ್ಮವಸ್ತುವೂ ಅವನದೇ ಆದುದರಿಂದ ನನ್ನ ಮೂಲಕ ಕೋಮಲ ಮಧುರ ಕವಿತ್ವವನ್ನು ಮಾಡಿಸಿ ಹಾಡಿದ ಮಹೋಪಕಾರಕನಿಗೆ ಈ ವಿಭೂತಿಯಲ್ಲೂ ಆ ವಿಭೂತಿಯಲ್ಲೂ ಕರ್ತವ್ಯವಾದ ಪ್ರತ್ಯುಪಕಾರವು ಯಾವುದೂ ಇಲ್ಲ. (ಅನ್ತಹ ಮಹೋಪಕಾರವನ್ನು ಮಾಡಿರುತ್ತಾನೆಂದು ಭಾವವು.)

(೧೧) ಇಙ್ಗುಮಙ್ಗುಮ್ ತಿರುಮಾಲನ್ಱಿ ಯಿನ್ಱಿ ಕಣ್ಡು,
ಅಙ್ಙನೇ ವಣ್‌ಕುರುಕೂರ್ ಚ್ಚಡಕೋಪನ್,
ಇಙ್ಙನೇ ಶೊನ್ನ ವೋರಾಯಿರತ್ತಿಪ್ಪತ್ತುಮ್,
ಎಙ್ಙನೇ ಶೊಲ್ಲಿನುಮಿನ್ಬಮ್ ಪಯಕ್ಕುಮೇ.

ಪ್ರ॥ ಇಙ್ಗುಮ್—ಈ ವಿಭೂತಿಯಲ್ಲಿ ಆಶ್ರಯಣದಶೆಯಲ್ಲೂ, ಅಙ್ಗುಮ್—ಆ ವಿಭೂತಿಯಲ್ಲಿ ಕೈಙ್ಕರ್ಯದಶೆಯಲ್ಲೂ, ತಿರುಮಾಲ್ – ಶ್ರಿಯಃಪತಿತ್ವವುಳ್ಳವನನ್ನು, ಅನ್ಱಿ— ಹೊರತು, ಇನ್ಱಿ—ಬೇರೆ ಯಾರೂ ಇಲ್ಲವೆಂಬುದನ್ನು, ಕಣ್ಡು—ಸ್ಮರಿಸಿ, ಅಙ್ಙನೇ—ಆ ಪ್ರಕಾರದಲ್ಲಿ ಕೈಙ್ಕರ್ಯಪರರಾಗಿರುವ, ವಣ್—ಉದಾರರಾದ, ಕುರುಕೂರ್ ಶಡಕೋಪನ್—ಕುರುಕಾಪುರಿಯ ಶಠಾರಿಮುನಿವರ್ಯರು, ಇಙ್ಙನೇ— ಈ ಪ್ರಕಾರದಲ್ಲಿ, ಶೊನ್ನ—ರಚಿಸಿದ (ಅವನ ಪ್ರೇರಣೆಯಿಂದ ವಾಚಿಕ ಕೈಙ್ಕರ್ಯರೂಪವಾಗಿ ರಚಿಸಿದ), ಓರಾಯಿರತ್ತು—ಒಂದುಸಾವಿರ ಪದ್ಯಗಳೊಳು, ಇಪ್ಪತ್ತುಮ್—ಈ ಹತ್ತು ಪದ್ಯಗಳು, ಎಙ್ಙನೇ—ಯಾವ ಪ್ರಕಾರದಲ್ಲಿ, ಶೊಲ್ಲಿನುಮ್—ಹೇಳಿದಾಗ್ಯೂ, ಇನ್ಬಮ್—ಮಹಾನನ್ದವನ್ನು, ಪಯಕ್ಕುಮೇ—ಉಂಟುಮಾಡುವುವು.

( ಸ-ಗಾ-ರ ॥ )—

ಅತ್ರಾಪ್ಯಮುತ್ರ ಪರಮಸ್ತು ವಿನೇನ್ದಿರೇಶಂ
ನಾಸ್ತ್ಯನ್ಯ ಇತ್ಯಯಮಹೋ ! ಶಠಜಿನ್ಮುನೀನ್ದ್ರಃ ।
ಚಕ್ರೇ ಸಹಸ್ರಮುಚಿತಂ ದಶಕಂ ತದೇತತ್
ಸಙ್ಕೀರ್ತಿತಂ ವಿತನುತೇ ಪರಮಂ ಪ್ರಮೋದಮ್ ॥

ತಾ॥ ಈ ವಿಭೂತಿಯಲ್ಲಿ ಆಶ್ರಯಣವೇಳೆಯಲ್ಲೂ, ಆ ವಿಭೂತಿಯಲ್ಲಿ ಕೈಙ್ಕರ್ಯ ಸಮಯದಲ್ಲೂ—ಶ್ರಿಯಃಪತಿಯಾದ ಅವನನ್ನು ಹೊರತು ಬೇರೆ ಯಾರೂ ಸೇವ್ಯರಿಲ್ಲ ವೆಂಬುದನ್ನು ತಿಳಿದು ಆ ಪ್ರಕಾರ ಕೈಙ್ಕರ್ಯನಿರತರಾಗಿರುವ ಉದಾರರಾದ ಕುರುಕಾ ಪುರಿಯ ಶ್ರೀ ಶಠಾರಿಮುನಿವರ್ಯರು ವಾಚಿಕ ಕೈಙ್ಕರ್ಯರೂಪವಾಗಿ ಅವನ ಪ್ರೇರಣೆ ಯಿಂದ ರಚಿಸಿದ ಸಹಸ್ರ ಪದ್ಯಮಾಲೆಯೊಳು ಈ ದಶಕವು ಯಾವ ರೀತಿಯಲ್ಲಿ ಪಠನ ಮಾಡಿದಾಗ್ಯೂ ನಿರತಿಶಯಾನನ್ದವನ್ನು ಉಂಟುಮಾಡುವುದು.

( ದ್ರ-ಉ-ಸಂ ॥ )—

ಪೃಷ್ಟಃ ಫಲಂ ಸ್ವವಸತೇರಿಹ ದುಷ್ಕರಾಯಾ-
ಸ್ತ್ವೇನ ಪ್ರಬನ್ಧರಚನಾಂ ಫಲಮಾಹ ಶೌರಿಃ ।
ಅನ್ಯೇಷು ಸತ್ಸ್ವಪಿ ತದಾ ಸ್ವಮಪೇಕ್ಷಮಾಣ-
ಮಪ್ರತ್ಯುಪಕ್ರಿಯಮಮುಂ ನವಮೇ ಜಗೌ ಸಃ ॥

( ದ್ರ-ಉ-ತಾ-ರ ॥ )—

ಸ್ವಾಮಿತ್ವಾಚ್ಛೌರ್ಯಭಾವಾದಪಿ ಚ ಕರುಣಯಾ ದತ್ತವಾಗ್ಜೃಮ್ಭಣತ್ವಾ-
ದುಜ್ಜೀವಾಪಾದಕತ್ವಾದಘಟಿತಘಟನಾಶಕ್ತಿವೈಕುಣ್ಠಯೋಗಾತ್ ।
ಶುದ್ಧಸ್ವಾನ್ತತ್ವ-ಚಕ್ರಾಯುಧ-ಜಲಧಿಸುತಾವಲ್ಲಭತ್ವಾತ್ ಪಿತೃತ್ವಾತ್
ಸ್ವೇ ಸ್ತೋತ್ರೇ ವಿಷ್ಣುರಪ್ರತ್ಯುಪಕೃತಿವಿಷಯೇ ಸ್ವಾರ್ಯ ಯುನಕ್ತೀತ್ಯಗಾಯತ್

(ಈ ನವಮದಶಕದ ಸಾರಾಂಶ—)

ಈ ಒಂಬತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನಿಂದ ಪ್ರೇರಿತರಾಗಿ, ವಾಚಿಕ ಕೈಙ್ಕರ್ಯರೂಪವಾಗಿ ಈ ದಿವ್ಯಕವಿತಾರೂಪವಾದ ಪ್ರಬನ್ಧ ವನ್ನು ಅವನೇ ತನ್ನ ಸ್ತೋತ್ರಕ್ಕಾಗಿ ಇವರಮೂಲಕ ಮಾಡಿಸಿದ ಮಹೋಪ ಕಾರವನ್ನು ಸ್ಮರಿಸಿ ಸ್ಮರಿಸಿ, ಪ್ರತ್ಯುಪಕಾರವನ್ನು ತಿಳಿಯದೆ ವಿಸ್ಮಿತರಾಗಿ, ತಮಗೆ ಕರ್ತವ್ಯಾಂಶವೇ ಉಭಯ ವಿಭೂತಿಯಲ್ಲೂ ಇಲ್ಲವೆಂದು—ನಿರ್ಣಯಿಸಿ ಇರುತ್ತಾರೆ.

ಶ್ರೀಃ

# ಸಪ್ತಮಶತಕದಲ್ಲಿ — ದಶಮದಶಕ.

## (ಇನ್ಬವೆ ಪಯಕ್ಕ —)

(ಈ ದಶಕದಲ್ಲಿ-ಶ್ರೀಶಠಾರಿ ಮುನಿವರ್ಯರು ಮಲಯಾಳದೇಶದಲ್ಲಿರುವ ವಿಳೈಯೆಂಬ ಶ್ರೀ ನದೀಮಾತೃಕಗ್ರಾಮದ ಸ್ವಾಮಿಯ ಪಾದಾ ಯುಗಳದಲ್ಲಿ ನಿತ್ಯಸೇವೆಯಂ ಮಾಡಲಪೇಕ್ಷಿಸುತ್ತಾರೆ.)

---

(೧) ಇನ್ಬವ್ ಪಯಕ್ಕ ವೆೞಿಲ್‌ಮಲರ್‌ಮಾದರುಮ್
ತಾನುಮಿವ್ವೇೞುಲಕ್ಕೈ,
ಇನ್ಬವ್‌ಪಯಕ್ಕ ವಿನಿದುಡನ್
ವೀಱ್ಱಿರುನ್ದಾಳ್‌ಕಿನ್ಱವೆಙ್ಗಳ್‌ಪಿರಾನ್,
ಅನ್ಬುಱ್ಱಮರ್‌ನ್ದುಱೈಕಿನ್ಱ ವಣಿಪೊೞಿಲ್‌ಶೂೞ್
ತಿರುವಾಱನ್ವಿಳೈ,
ಅನ್ಬುಱ್ಱಮರ್‌ನ್ದು ವಲಮ್‌ಶೆಯ್ದು ಕೈತೊೞುಮ್
ನಾಳ್‌ಕಳುಮಾಕುಙ್ಕೊಲೋ.

ಪ್ರ|| ಎೞಿಲ್-ರಮ್ಯರೂಪವುಳ್ಳ, ಮಲರ್ ಮಾದರುಮ್-ಪದ್ಮೋದ್ಭವೆಯಾದ ಲಕ್ಷ್ಮೀದೇವಿಯೂ, ತಾನುಮ್-(ಅವಳಿಗೆ ಪ್ರಾಣವಲ್ಲಭನಾದ) ತಾನೂ, ಇನ್ಬಮ್ ಪಯಕ್ಕ-ಆನನ್ದವುಂಟಾಗುವಂತೆ, ಇನಿದುಡನ್-ಭೋಗರುಚಿಯೊಡನೆ, ವೀಱ್ಱಿರುನ್ದು - ಬಿಜಯಮಾಡಿದ್ದು, ಇ ಏೞುಲಕ್ಕೈ-ಈ ಏಳು ಲೋಕಗಳನ್ನೂ, ಇನ್ಬಮ್‌ಪಯಕ್ಕ-ಆನನ್ದವುಂಟಾಗುವಂತೆ, ಆಳ್‌ಕಿನ್ಱ-ಆಳುವ, ಎಙ್ಗಳ್‌ಪಿರಾನ್-ನಮ್ಮ ಸ್ವಾಮಿಯು, ಅನ್ಬು ಉಱ್ಱು-ಆಶೆಪಟ್ಟು, ಅಮರ್‌ನ್ದು-ಅತ್ಯಾದರದೊಡನೆ, ಉಱೈಕಿನ್ಱ - ನಿತ್ಯವಾಸಮಾಡುವ ಅಣಿಪೊೞಿಲ್‌ಶೂೞ್ - ರಮ್ಯವಾದ ಉದ್ಯಾನಗಳಿಂದ ಪರಿವೃತವಾದ, ತಿರುವಾಱನ್ವಿಳೈ-ಶ್ರೀ ನದೀಮಾತೃಕ ಗ್ರಾಮವನ್ನು, ಅನ್ಬು ಉಱ್ಱು-ಪ್ರೀತಿಯೊಡನೆ, ಅಮರ್‌ನ್ದು-ಆಶ್ರಯಿಸಿ, ವಲಮ್ ಶೆಯ್ದು-ಪ್ರದಕ್ಷಿಣಮಾಡಿ, ಕೈತೊೞುಮ್-ಅಂಜಲಿಮಾಡುವ, ನಾಳ್‌ಕಳುಮ್-ದಿನಗಳೂ, ಆಕುಮ್ ಕೊಲ್-(ನಮಗೆ) ಉಂಟಾಗುವುವೋ ?

( ಸ–ಗಾ–ರ || )—

ಅನನ್ತಾಮೃತಭೋಗಸಕ್ತಹೃದಯೌ ಪದ್ಮಾ ಚ ವಿಷ್ಣುಸ್ಸ್ವಯಂ
ಲೋಕಾನ್ ಸಪ್ತ ಚ ಸನ್ನಿಯೋಜ್ಯ ಚ ಮುದೇ ದಾಸ್ಯೇ ಸ್ವಕೀಯೇ ಸದಾ ।
ಅನನ್ತಾಶ್ರಯನಿತ್ಯವಾಸಸಹಿತೇ ತೌ ಶ್ರೀನದೀಮಾತೃಕ–
ಗ್ರಾಮೇ ಸನ್ನಿಹಿತೌ ಹಿ! ತತ್ರ ಚ ಮುದಾ ಕಿಂ ವಾಞ್ಜಲಿಂ ಕುರ್ಮಹೇ ? ||

ತಾ|| ಲಕ್ಷ್ಮೀದೇವಿಯೂ ತಾನೂ ಆನನ್ದದೊಡನೆ ಭೋಗರುಚಿಯಿಂದ ಬಿಜಯಮಾಡಿ ಏಳುಲೋಕಗಳನ್ನೂ ಆಳುವ ಸ್ವಾಮಿಯಾಗಿದ್ದರೂ ರಮ್ಯೋದ್ಯಾನ ಪರಿವೃತವಾದ (ಶ್ರೀನದೀಮಾತೃಕಗ್ರಾಮವೆಂಬ) ತಿರುವಾಱನ್ವಿಳೈಯೆಂಬ ಗ್ರಾಮದಲ್ಲಿ ಪ್ರೀತಿಯೊಡನೆ ನಿತ್ಯವಾಸಮಾಡುತ್ತಿರುವುದರಿಂದ ನಾವು ಈ ಗ್ರಾಮವನ್ನು ಆದರದೊಡನೆ ಆಶ್ರಯಿಸಿ ಪ್ರದಕ್ಷಿಣಮಾಡಿ ಅಂಜಲಿಮಾಡುವ ದಿನಗಳು ಎಂದಿಗೆ ಬರುವುವೋ – ಎಂದು ಆಶೆಪಡುತ್ತಾರೆ.

(೨) ಆಕುಙ್ಕೊಲ್ ಐಯಮೊನ್ಱಿನ್ಱಿ ಯಕಲಿಡಮುಱ್ಱವುಮ್
ಈರಡಿಯೇ,
ಆಕುಮ್ ಪರಿಶುನಿಮಿರ್ನ್ದ
ತಿರುಕ್ಕುಱಳಪ್ಪನಮರ್ನ್ದುಱೈಯುಮ್,
ಮಾಕವಮ್ ತಿಕೞ್ ಕೊಡಿ ಮಾಡಙ್ಗಳ್ ನೀಡುಮದಿಳ್
ತಿರುವಾಱನ್ವಿಳೈ,
ಮಾಕನ್ದ ನೀರ್ಕೊಣ್ಡು ತೂವಿ ವಲಂಶೆಯ್ದು ಕೈತೊೞ
ಕ್ಕೂಡುಙ್ಕೊಲೋ.

ಪ್ರ|| ಒನ್ಱು ಐಯಮ್ – ಒಂದು ಸಂದೇಹವೂ, ಇನ್ಱಿ–ಇಲ್ಲದಂತೆ, ಆಕುಮ್ ಕೊಲ್–ಆಗುವುದೋ ? (ಯಾವುದೆಂದರೆ—) ಅಕಲ್–ವಿಶಾಲವಾದ, ಇಡಮ್ ಮುಱ್ಱವುಮ್– ಲೋಕಗಳನ್ನೆಲ್ಲಾ, ಈರಡಿಯೇ – (ತನ್ನ) ಎರಡುಪಾದಗಳೇ, ಆಕುಮ್ ಪರಿಶು–ಆಗುವಂತೆ, ನಿಮಿರ್ನ್ದ–ಬೆಳೆದ, ತಿರುಕ್ಕುಱಳ್ – ಶ್ರೀ ವಾಮನ ರೂಪಿಯಾದ, ಅಪ್ಪನ್–ಸ್ವಾಮಿಯು, ಅಮರ್ನ್ದು–ಅತ್ಯಾದರದಿಂದ, ಉಱೈಯುಮ್– ನಿತ್ಯವಾಸಮಾಡುವ, ಮಾ–ವಿಶಾಲವಾದ, ಕವಮ್–ಆಕಾಶದಲ್ಲಿ, ತಿಕೞ್–ಪ್ರಕಾಶಿಸುವ, ಕೊಡಿ–ಧ್ವಜಗಳುಳ್ಳ, ಮಾಡಮ್ – ಉಪ್ಪರಿಗೆಗಳನ್ನೂ, ನೀಡುಮದಿಳ್– ಉನ್ನತವಾದ ಪ್ರಾಕಾರಗಳನ್ನು ಉಳ್ಳ, ತಿರುವಾಱನ್ವಿಳೈ – ಶ್ರೀ ನದೀಮಾತೃಕ ಗ್ರಾಮವನ್ನು, ಮಾ–ಶ್ಲಾಘ್ಯವಾದ, ಕನ್ದ–ಪರಿಮಳವುಳ್ಳ, ನೀರ್ಕೊಣ್ಡು–ತೀರ್ಥ

ವನ್ನು ತೆಗೆದುಕೊಂಡುಹೋಗಿ, ತೂವಿ-ಸೇಚನವಮಾಡಿ, ವಲಮ್‌ಶೆಯ್ದು-ಪ್ರದಕ್ಷಿಣ ಮಾಡಿ,ಕೈತೊಳ್ದು - ಅಂಜಲಿಮಾಡಲು, ಕೂಡುಮ್ ಕೊಲೋ-ನಮಗೆ ಅನುಕೂಲ ವಾಗುವುದೋ ?

( ಸ-ಗಾ-ರ || )

ನಿಸ್ಸಂದೇಹಮಿದಂ ಭವತ್ಕಿಮು ಮಹಾಲೋಕಾನಶೇಷಾನಪಿ
ಸ್ವಾಂಘ್ರಿದ್ವನ್ದ್ವಮಿತಾನ್ ವಿಧಾಯ ಜಯತಿ ಶ್ರೀವಾಮನೋ ಮೇ ಪ್ರಭುಃ|
ಅತ್ಯುಚ್ಚೋಜ್ಜ್ವಲರಮ್ಯಸೌಧವಲಯೇ ಗ್ರಾಮೇ ನದೀಮಾತೃಕೇ
ತಂ ಗತ್ವಾ ಕಿಮು ಸಪ್ರದಕ್ಷಿಣಮಹೋ! ತೀರ್ಥೈಸ್ಸುಗನ್ಧೈರ್ನಮಃ ||

ತಾ|| (ನಮಗೆ ನಿಸ್ಸಂಶಯವಾಗಿ ಇದು ಸಂಭವಿಸುವುದೋ ?—ಯಾವು ದೆಂದರೆ) ಸಕಲ ಲೋಕಗಳನ್ನೂ ತನ್ನ ಎರಡುಪಾದಗಳಿಂದಲೇ ಅಳೆಯುವಂತೆ ಅತ್ಯುನ್ನತವಾಗಿ ಬೆಳೆದ ಶ್ರೀ ವಾಮನಮೂರ್ತಿಯು ಆದರದಿಂದ ನಿತ್ಯವಾಸ ಮಾಡುವ ಉನ್ನತ ಧ್ವಜಪ್ರಾಕಾರ ಪರಿವೃತವಾದ ಶ್ರೀ ನದೀಮಾತೃಕ ಗ್ರಾಮ ವನ್ನು ನಾವು ಪರಿಮಳ ತೀರ್ಥಸೇಚನವಮಾಡಿ ಪ್ರದಕ್ಷಿಣ ನಮಸ್ಕಾರಗಳಿಂದ ಭಜಿ ಸುವಂತೆ ನಮಗೆ ಅನುಕೂಲವಾಗುವುದೋ ?

(೩) ಕೂಡುಙ್ಕೊಲ್ ವೈಕಲುಮ್ ಗೋವಿನ್ದನೈ
ಮದುಶೂದನೈ ಕೋಳರಿಯೈ,
ಆಡುಮ್ ಪಱವೈ ಮಿಶೈ ಕ್ಕಣ್ಡು ಕೈತೊಳುದಱ್ಱಿ
ಯವನುತ್ತಿಯುಮ್,
ಪಾಡುಮ್ ಪೆರುಮ್ ಪುಕಳ್
ನಾನ್ಮತ್ತುವೇಳ್ವಿಯ್ಯೈನ್ದುಙ್ಗಮ್ ಪನ್ನಿನರ್‌ವಾಳ್,
ನೀಡುಪೊೞಿಲ್ ತಿರುವಾಱನ್‌ವಿಳೈತೊಳ
ವಾಯ್‌ಕ್ಕುಙ್ಕೊಲ್ ನಿಚ್ಚಲುಮೇ.

ಪ್ರ|| ವೈಕಲುಮ್-ಪ್ರತಿದಿನವೂ, ಕೂಡುಙ್ಕೊಲ್-ಹೀಗೆ ಸಂಭವಿಸುವುದೋ? ಗೋವಿನ್ದನೈ-ಗೋವುಗಳ ರಕ್ಷಣದಲ್ಲಿ ದೀಕ್ಷಿತನನ್ನು, ಮದುಶೂದನೈ-ಮಧುಸೂದ ನನನ್ನು, ಕೋಳರಿಯೈ-ಶತ್ರುಗಳಿಗೆ ಸಿಂಹರೂಪಿಯಾದವನನ್ನು, ಆಡುಮ್-ಜಯ ಶೀಲನಾಗಿ ಆಡುವ, ಪಱವೈಮಿಶೈ-ಗರುಡನಮೇಲೆ, ಕಣ್ಡು-ಕಂಡು ದರ್ಶನಮಾಡಿ, ಕೊತೊೞುದು-ಅಂಜಲಿಮಾಡಿ, ಅನ್ನಿ-ಅಷ್ಟೇ ಅಲ್ಲದೆ, ಅವನ್ ಉತ್ತಿಯುಮ್-

ಅವನು ವಾಸಮಾಡುವ, ಪಾಡುಮ್ ಪೆರುಮ್‌ಪುಗೞ್-ಸಂಕೀರ್ತಿತವಾದ ಮಹಾ ಯಶಸ್ಸುಳ್ಳ, ನಾನ್ಮಱೈ-ನಾಲ್ಕು ವೇದಗಳನ್ನೂ, ಐನ್ದುವೇಳ್ವಿ-ಪಂಚ ಮಹಾ ಯಜ್ಞಗಳನ್ನೂ, ಆಱಙ್ಗಮ್ - ಷಡಙ್ಗಗಳನ್ನೂ, ಪನ್ನಿನರ್ - ಅಭ್ಯಾಸಮಾಡಿ ತಿಳಿದವರು, ವಾೞ್-ಭಗವದನುಭವದೊಡನೆ ಬಾಳುವ, ನೀಡುಪೊೞಿಲ್-ಮಹೋದ್ಯಾನಗಳುಳ್ಳ, ತಿರುವಾಱನ್‌ವಿಳೈ - ಶ್ರೀ ನದೀಮಾತೃಕ ಗ್ರಾಮವನ್ನು, ತೊೞ-ಸೇವಿಸಲು, ನಿಚ್ಚಲುಮ್-ಪ್ರತಿದಿನವೂ, ವಾಯ್‌ಕ್ಕುಮ್ ಕೊಲ್-ಅನುಕೂಲಿಸುವುದೋ ?

( ಸ-ಗಾ-ರ ॥ )—

ಗೋವಿನ್ದಂ ಮದುಸೂದನಂ ಹರಿಮುಮುಂ ಸಿಂಹಂ ರಿಪೂಣಾಂ ವಯಂ
ದೃಷ್ಟ್ವಾತ್ರ ಶ್ರೀಗರುಡಧ್ವಜಂ ತದುಷಿತೇ ಗ್ರಾಮೇ ನದೀಮಾತೃಕೇ ।
ಯಜ್ಞೈಃ ಪಞ್ಚಭಿರಞ್ಚಿತೇಽಪಿ ಚ ಚತುರ್ವೇದೈಃ ಷಡಙ್ಗೈರಪಿ
ಶ್ರೀಶಂ ತಂ ಪ್ರಣಮಾಮ ಕಿನ್ನು ಸತತಂ? ಕಿಂ ಸಾಧ್ಯಮೇತತ್ತು ನಃ? ॥

ತಾ॥ ಗೋರಕ್ಷಣ ದೀಕ್ಷಿತನಾಗಿಯೂ ಮಧುಸೂದನನಾಗಿಯೂ ಶತ್ರುಗಳಿಗೆ ಸಿಂಹಪ್ರಾಯನಾಗಿಯೂ ಇರುವ ಗರುಡವಾಹನನಾದ ಸ್ವಾಮಿಯನ್ನು ದರ್ಶನ ಮಾಡಿ, ಅವನು ನಿತ್ಯವಾಸಮಾಡುವ ಚತುರ್ವೇದ-ಪಂಚಮಹಾಯಜ್ಞ-ಷಡಙ್ಗಾದಿ ನಿರತರು ಬಾಳುವಂತಹ ಮಹೋದ್ಯಾನಮಾಲಾ ಪರಿವೃತವಾದ ಶ್ರೀ ನದೀಮಾತೃಕ ಗ್ರಾಮವನ್ನು ನಾವು ಪ್ರತಿದಿನವೂ ಸೇವಿಸುವಂತೆ ನಮಗೆ ಅನುಕೂಲಿಸುವುದೋ ?

(೪) ವಾಯ್‌ಕ್ಕುಙ್‌ಗೊಲ್ ನಿಚ್ಚಲುಮೆಪ್ಪೊೞುದುಮ್
ಮನತ್ತೀಙ್ಗು ನಿನೈಕ್ಕಪ್ಪೆಱ,
ವಾಯ್‌ಕ್ಕುಙ್‌ಗರುಮ್ಬುಮ್ ಪೆರುಞ್ಜೆನ್ನೆಲುಮ್
ವಯಲ್‌ಶೂೞ್ ತಿರುವಾಱನ್‌ವಿಳೈ,
ವಾಯ್‌ಕ್ಕುಮ್‌ಪೆರುಮ್‌ಪುಗೞ್ ಮೂವುಲಗೀಶನ್
ವಡಮದುರೈ ಪ್ಪಿಱನ್ದ,
ವಾಯ್‌ಕ್ಕುಮ್ ಮಣಿನಿಱಕ್ಕಣ್ಣಪಿರಾನ್‌ತನ್
ಮಲರಡಿಪ್ಪೋದುಗಳೇ.

ಪ್ರ॥ ವಾಯ್‌ಕ್ಕುಮ್-ತುಂಬಿ ಫಲಿಸುವ, ಕರುಮ್ಬುಮ್-ಕಬ್ಬೂ, ಪೆರುಂಶೆನ್ನೆಲುಮ್ - ಅಧಿಕವಾದ (ದೊಡ್ಡ) ಕೆಂಪು ಬತ್ತವೂ ಉಳ್ಳ, ವಯಲ್ ಶೂೞ-ಕ್ಷೇತ್ರಗಳಿಂದ ಪರಿವೃತವಾದ, ತಿರುವಾಱನ್‌ವಿಳೈ-ಶ್ರೀ ನದೀಮಾತೃಕ ಗ್ರಾಮದಲ್ಲಿ,

ವಾಯ್ಕ್ಕುಮ್-ಸನ್ನಿಹಿತನಾಗಿ ಪಡೆದ, ಪೆರುಮ್ ಪುಕರ್ತ್ತ-ಮಹಾ ಕೀರ್ತಿಯುಳ್ಳ, ಮೂವುಲಕು ಈರ್ಶ - ತ್ರಿವಿಧ ಚೇತನಾ ಚೇತನ ಪ್ರಪಂಚಗಳಿಗೆ ಸ್ವಾಮಿಯು, ವಡಮದುರೈ-ಉತ್ತರ ಶ್ರೀ ಮಥುರಾಪುರಿಯಲ್ಲಿ, ಪಿರನ್ದ-ಅವತರಿಸಿದ, ವಾಯ್ಕ್ಕುಮ್-ಆಶ್ರಿತ ಸುಲಭನಾಗಿ ಬೆಳೆದ, ಮಣಿನೀರ್-ನೀಲಮಣಿವರ್ಣನಾದ, ಕಣ್ಣಪಿರಾನ್ ತನ್-ಶ್ರೀಕೃಷ್ಣಸ್ವಾಮಿಯ, ಮಲರಡಿಪ್ಪೋದುಕಳೇ-ವಿಕಸಿತವಾದ ಪಾದಾಮ್ಬುಜಗಳನ್ನು, ಈಙ್ಗ-ಇಲ್ಲಿಂದಲೇ, ಮನತ್ತು-ಮನಸ್ಸಿನಲ್ಲಿ, ನಿನೈಕ್ಕ-ಸ್ಮರಿಸಲು, ನಿಚ್ಚಲುಮ್-ಪ್ರತಿದಿನವೂ, ಎಪ್ಪೊೞುದುಮ್-ಪ್ರತಿಕ್ಷಣವೂ, ಪೆರ-ಭಾಗ್ಯವನ್ನು ಪಡೆಯಲು, ವಾಯ್ಕ್ಕುಮ್ ಕೊಲ್-ಅವಕಾಶವು ಸಂಭವಿಸುವುದೋ ?

( ಸ-ಗಾ-ರ ‖ )—

ಇಕ್ಷು-ವ್ರೀಹಿ-ಸಮೃದ್ಧಸಸ್ಯಭರಿತೇ ಗ್ರಾಮೇ ನದೀಮಾತೃಕೇ
ತ್ರೈಲೋಕ್ಯಾಧಿಪತೇಃ ಪ್ರಭೋಸ್ತು ಮಧುರಾಜಾತಸ್ಯ ಕೃಷ್ಣಸ್ಯ ತೌ |
ರಮ್ಯೌ ನೀಲತನೋಶ್ಚ ದಿವ್ಯಚರಣೌ ಪದ್ಮಾಯಿತೌ ಕಿಂ ಹೃದಾ
ಧ್ಯಾತುಂ ಶಕ್ಯತಮೌ ಮಮಾತ್ರ ವಸತಃ? ಕಿಂ ಸಾಧ್ಯಮೇತತ್ಸದಾ? ‖

ತಾ‖ ಇಕ್ಷು-ವ್ರೀಹಿ-ಸಮೃದ್ಧವಾದ ಮಹಾಕ್ಷೇತ್ರಗಳಿಂದ ಪರಿವೃತವಾದ ಶ್ರೀ ನದೀಮಾತೃಕ ಗ್ರಾಮದಲ್ಲಿ ನಿತ್ಯವಾಸಮಾಡುವ ಅಪಾರಕೀರ್ತಿಯುಳ್ಳ ತ್ರೈಲೋಕ್ಯಾಧಿಪತಿಯಾದ ಉತ್ತರ ಮಧುರೆಯಲ್ಲಿ ಅವತರಿಸಿದ ನೀಲಮಣಿವರ್ಣನಾದ ಶ್ರೀಕೃಷ್ಣಸ್ವಾಮಿಯ ಪಾದಾರವಿನ್ದಗಳನ್ನು ಇಲ್ಲಿಂದಲೇ ಮನಸ್ಸಿನಲ್ಲಿ ಸ್ಮರಿಸುವ ಭಾಗ್ಯವು ನಮಗೆ ಪ್ರತಿದಿನವೂ ಪ್ರತಿಕ್ಷಣವೂ ಉಂಟಾಗುವುದೋ ?

(೫) ಮಲರಡಿ ಪ್ಪೋದುಕಳೆನ್ನೆಞ್ಜತ್ತೆಪ್ಪೊೞುದುಮಿರುತ್ತಿ
ವಣಙ್ಗ,
ಪಲರಡಿಯಾರ್ ಮುನ್ಬರುಳಿಯ
ಪಾಮ್ಬಣೈಯಪ್ಪನಮರ್ನ್ದುತ್ತೈಯುಮ್,
ಮಲರಿಲ್ ಮಣಿನೆಡುಮಾಡಙ್ಗಳ್ ನೀಡುಮದಿಳ್
ತಿರುವಾಱನ್ವಿಳೈ,
ಉಲಕಮಲಿಪುಕೞ್ ಪಾಡ ನಮ್ಮೇಲ್ವಿನೈ ಯೊನ್ಱುನಿಲ್ಲಾ
ಕೆಡುಮೇ.

ಪ್ರ‖ ಮಲರ್-ವಿಕಸಿತವಾದ, ಅಡಿಪ್ಪೋದುಕಳ್-ಪಾದಾರವಿನ್ದಗಳನ್ನು, ಎನ್ ನೆಞ್ಜತ್ತು-ನನ್ನ ಮನಸ್ಸಿನಲ್ಲಿ, ಎಪ್ಪೊೞುದುಮ್-ಯಾವಾಗಲೂ, ಇರುತ್ತಿ-ಇಟ್ಟು,

ವಣಙ್ಗ–ನಮಸ್ಕರಿಸಲು, ಪಲರ್–ಅನೇಕರಾದ (ನಿತ್ಯಸೂರಿಗಳೇ ಮೊದಲಾದ), ಅಡಿಯಾರ್ ಮುನ್ಬು–ಭಕ್ತರಮುಂದೆ, ಅರುಳಿಯ–ಕೃಪೆಮಾಡಿದ, ಪಾಮ್ಬು ಅಣೈ–ಶೇಷಶಾಯಿಯಾದ, ಅಪ್ಪನ್–(ಉಪಕಾರಕನಾದ) ಸ್ವಾಮಿಯು, ಅಮರ್ನ್ದು–ಆದರದಿಂದ, ಉಱೈಯುಮ್ – ನಿತ್ಯವಾಸಮಾಡುವ, ಮಲರಿಲ್ – ದೇವತೆಗಳ ಪುಷ್ಪವೃಷ್ಟಿಯುಳ್ಳ, ಮಣಿ–ರತ್ನಮಯವಾದ, ನೆಡುಮಾಡಙ್ಗಳ್– ಉನ್ನತವಾದ ಉಪ್ಪರಿಗೆಗಳೂ, ನೀಡುಮದಿಳ್–ಉನ್ನತಪ್ರಾಕಾರಗಳೂ ಉಳ್ಳ, ತಿರುವಾಱನ್ವಿಳೈ–ಶ್ರೀ ನದೀಮಾತೃಕ ಗ್ರಾಮದ, ಉಲಕಮ್ ಮಲಿಪುಕೞ್ – ಜಗದ್ವ್ಯಾಪಿಯಾದ ಕೀರ್ತಿಯನ್ನು, ಪಾಡ–ಹಾಡಲು, ನಮ್ಮೇಲ್–ನಮ್ಮಮೇಲೆ, ವಿನೈ–ಪಾಪಗಳು, ಒನ್ಱುಮ್–ಸ್ವಲ್ಪವೂ, ನಿಲ್ಲಾ–ನಿಲ್ಲದಂತೆ, ಕೆಡುಮ್–ನಷ್ಟವಾಗುವುವು.

( ಸ–ಗಾ–ರ || )—

ನಿತ್ಯಂ ಯೇ ಮನಸಾ ವಿಚಿನ್ತ್ಯ ಚರಣೌ ದಿವ್ಯೌ ತು ಪದ್ಮಾಯಿತೌ
ನನ್ತುಂ ಮೇ ಪ್ರಭುರಚ್ಯುತೋ ವಿಲಸತಿ ಗ್ರಾಮೇ ನದೀಮಾತೃಕೇ |
ಭಕ್ತಾನುಗ್ರಹಕೃಚ್ಛ ಶೇಷಶಯನಃ ಪುಷ್ಪಾಢ್ಯಸೌಧಾವೃತೇ
ಕೀರ್ತಿಂ ತಸ್ಯ ಜಗತ್ತತಾಂ ಯದಿ ವಯಂ ಗಾಯಾಮ ನಶ್ಯೇದಘಮ್ ||

ತಾ|| ಅವನ ಪಾದಾರವಿನ್ದಗಳನ್ನು ನನ್ನ ಮನಸ್ಸಿನಲ್ಲಿ ಎಂದಿಗೂ ಇಟ್ಟು ಕೊಂಡು ಧ್ಯಾನಮಾಡಿ ನಮಸ್ಕರಿಸುವಂತೆ ಅವನು ಕೃಪೆಮಾಡಿ ಶೇಷಶಾಯಿಯಾಗಿ ಆದರದಿಂದ ವಾಸಮಾಡುವ ದಿವ್ಯ ಪುಷ್ಪಭರಿತ–ಮಣಿಮಯಸೌಧ–ಮಹೋನ್ನತ ಪ್ರಾಕಾರ—ಪರಿವೃತವಾದ ಶ್ರೀ ನದೀಮಾತೃಕ ಗ್ರಾಮದ ದಿವ್ಯಕೀರ್ತಿಯನ್ನು ಹಾಡಲು, ನಮ್ಮಮೇಲೆ ಯಾವ ಪಾಪವೂ ಸ್ವಲ್ಪವೂ ಇಲ್ಲದಂತೆ ನಷ್ಟವಾಗುವುದು.

(೭) ಒನ್ಱುನಿಲ್ಲಾ ಕೆಡುಮ್ ಮುಱ್ಱುಮ್ ತೀವಿನೈಯುಳ್ಳಿ
ತೊಱ್ಱುಮಿನ್ ತೊಣ್ಡೀರ್,
ಅನ್ಱಙ್ಗಮರ್ವೆನ್ಱುರುಪ್ಪಿಣಿನಙ್ಗೈ ಯಣೈನೆಡುನ್ತೋಳ್
ಪುಣರ್ನ್ದಾನ್,
ಎನ್ಱುಮ್ ಪೊನ್ಱಾದುಮೆನ್ನೆಙ್ಙನಮ್ ತುಡಿಪ್ಪುವುಳ್ಳಿಯಿರುಕ್ಕಿನ್ಱ
ಪಿರಾನ್,
ನಿನ್ಱವಣಿ ತಿರುವಾಱನ್ವಿಳೈ ಯೆನ್ನುಮ್
ನೀಣಕರಮದುವೇ.

ಪ್ರ॥ ಅನ್ಱು-ಆದಿನ, ಅಜ್ಞ-ಅಲ್ಲಿ, ಅಮರ್ವೆನ್ಱು-(ರುಕ್ಮನನ್ನು) ಯುದ್ಧದಲ್ಲಿ ಜಯಿಸಿ, ನಱ್ಗಿಲ್-ಪೂರ್ಣಸಂಭವವುಳ್ಳ, ಉರುಪ್ಪಿಣಿ-ರುಕ್ಮಿಣಿಯ, ಅಣಿ-ಅಲಂಕಾರವುಳ್ಳ, ನೆಡುನ್ದೋಳ್-ಉದ್ದವಾದ ತೋಳುಗಳನ್ನು, ಪುಣರ್ನ್ದಾ-ಆಶ್ರಯಿಸಿದವನು, ಎನ್ಱುಮ್-ಎಂದಿಗೂ, ಎನ್ ನೆಞ್ಜಮ್-ನನ್ನ ಮನಸ್ಸು, ತುದಿಪ್ಪ-ಸ್ತೋತ್ರಮಾಡುವಂತೆ, ಉಳ್ಳೇ-ನನ್ನೊಳಗೆ, ಇರುಕ್ಕಿನ್ಱ-ವಾಸಮಾಡುತ್ತಿರುವ, ಪಿರಾನ್-ಸ್ವಾಮಿಯು, ನಿನ್ಱ-ನಿಂತು ಇರುವ, ಅಣಿ-ರಮ್ಯವಾದ, ತಿರುವಾಱನ್ ವಿಳೈಯೆನ್ನುಮ್-ಶ್ರೀ ನದೀಮಾತೃಕ ಗ್ರಾಮವೆಂಬ, ನೀಳ್‌ನಕರಮದುವೇ-ಮಹಾನಗರವನ್ನೇ, ತೊಣ್ಡೀರ್-ಭಕ್ತರೇ! ಉಳ್ಳಿ-ಮನಸ್ಸಿನಲ್ಲಿ ಚಿನ್ತಿಸಿ, ತೊೞುಮಿನ್-ನಮಸ್ಕರಿಸಿರಿ; ತೀವಿನೈ-ಕೆಟ್ಟಪಾಪಗಳು, ಒನ್ಱುಮ್-ಸ್ವಲ್ಪವೂ, ನಿಲ್ಲಾ-ನಿಲ್ಲದಂತೆ, ಮುಱ್ಱವುಮ್-ಸಮಗ್ರವಾಗಿ, ಕೆಡುಮ್-ನಷ್ಟವಾಗುವುವು.

( ಸ-ಗಾ-ರ ॥ )—

ತತ್ರಾಜೌ ಹಿ ತದಾ ವಿಜಿತ್ಯ ಚ ರಿಪುಂ ಪೂರ್ಣಾಂ ರಮಾಂ ರುಕ್ಮಿಣೀಂ
ದಿವ್ಯಾಲಂಕೃತಸದ್ಭುಜಾಂ ಶ್ರಿತಮಮುಂ ಕೃಷ್ಣಂ ಮನೋ ಮೇ ಸದಾ ।
ಸ್ತೋತುಂ ಶಕ್ತಮಿದಂ ಭವೇದಿತಿ ಹರಿರ್ಗ್ರಾಮೇ ನದೀಮಾತೃಕೇ
ಭಾತೀದಂ ತು ಪುರಂ ಶುಭಂ ನಮತ ಭೋ! ಭಕ್ತ್ಯಾ ಅಘಂ ನಶ್ಯತಿ ॥

ತಾ॥ ಆಕಾಲದಲ್ಲಿ ರುಕ್ಮನನ್ನು ಜಯಿಸಿ ರುಕ್ಮಿಣಿಯನ್ನು ವರಿಸಿ ಅವಳ ಸುನ್ದರವಾದ ತೋಳುಗಳನ್ನು ಆಶ್ರಯಿಸಿದ ಶ್ರೀಕೃಷ್ಣನು ಎಂದಿಗೂ ನನ್ನ ಮನಸ್ಸಿನಲ್ಲಿ ನಿಂತು ಸ್ತುತ್ಯನಾಗುವಹಾಗೆ ಶ್ರೀ ನದೀಮಾತೃಕ ಗ್ರಾಮದಲ್ಲಿ ನಿತ್ಯವಾಸಮಾಡುತ್ತಿರುವುದರಿಂದ ಆ ಗ್ರಾಮವನ್ನೇ ಎಲ್ಲೈ ಭಕ್ತರೇ! ನೀವು ಚಿನ್ತಿಸಿ ನಮಸ್ಕರಿಸಿರಿ, ನಿಮ್ಮ ಪಾಪಗಳೆಲ್ಲವೂ ನಷ್ಟವಾಗುವುವು.

(೭) ನೀಣಾಕಮದುವೇ ಮಲರ್‌ಚ್ಚೋಲೈಕಳ್ ಶೂೞ್
ತಿರುವಾಱನ್ ವಿಳೈ,
ನೀಣಾಕರತ್ತುಱೈಕಿನ್ಱ ಪಿರಾನ್ ನೆಡುಮಾಲ್‌ಕಣ್ಣನ್,
ವಿಣ್ಣವರ್ ಕೋನ್
ವಾಣಪುರವಮ್‌ಪುಕ್ಕು ಮುಕ್ಕಣ್‌ಪಿರಾನೈ ತೊಲೈಯ
ವೆಮ್‌ಪೋರ್‌ಕಳ್ ಶೆಯ್ದು,
ವಾಣನೈಯಾಯಿರನ್ದೋಳ್ ತುಣಿತ್ತಾನ್ ಶರಣನ್ಱಿ
ಮಱ್ಱೊನ್ಱಿಲಮೇ.

ಪ್ರ|| ನೀಳ್‌ನಕರಮ್–(ಅಯೋಧ್ಯೆಯೆಂದು ಪ್ರಸಿದ್ಧವಾದ) ಶ್ರೀ ವೈಕುಂಠ ಮಹಾನಗರವು, ಅದುವೇ–ಅರ್ಚಾವತಾರಸ್ಥಲವಾದ ಅದೇ ಆಗುವಂತೆ, ಮಲರ್ ಶೋಲೈಕಳ್ ಶೂழ் – ಪುಷ್ಪೋದ್ಯಾನಗಳಿಂದ ಪರಿವೃತವಾದ, ತಿರುವಾಟ್ಟಾಱವಿಳ್ಳೈ– ಶ್ರೀ ನದೀಮಾತೃಕಗ್ರಾಮವೆಂಬ, ನೀಳ್‌ನಕರತ್ತು–ಮಹಾನಗರದಲ್ಲಿ, ಉಱೈಕಿನ್ಱ– ನಿತ್ಯವಾಸಮಾಡುವ, ಪಿರಾ಼ನ್–ಸ್ವಾಮಿಯಾದ, ನೆಡುಮಾಲ್ – ಆಶ್ರಿತವತ್ಸಲನಾದ, ಕಣ್ಣನ್–ಶ್ರೀಕೃಷ್ಣರೂಪಿಯಾದ, ವಿಣ್ಣವರ್ ಕೋನ್ – ನಿತ್ಯಸೂರಿಗಳಿಗೆ ಅಧಿಪತಿಯಾದವನು, ವಾಣಪುರಮ್–ಬಾಣಾಸುರನ ಪಟ್ಟಣವನ್ನು, ಪುಕ್ಕು–ಪ್ರವೇಶಿಸಿ, ಮುಕ್ಕಣ್‌ಪಿರಾನ್ಯೆ – ತ್ರಿಣೇತ್ರನಾದ ರುದ್ರನನ್ನು ಕುರಿತು, ತೊಲೈಯ – ತಾನು ಈಶ್ವರನೆಂಬ ದುರಭಿಮಾನವು ಹೋಗುವಂತೆ, ವೆಮ್‌ಪೋರ್‌ಕಳ್‌ಶೆಯ್ದು–ಘೋರ ಯುದ್ಧಗಳನ್ನುಮಾಡಿ, ವಾಣನ್ಯೈ–ಬಾಣನನ್ನು, ಆಯಿರಮ್‌ತೋಳ್ ತುಣಿತ್ತಾನ್– ಸಾವಿರಭುಜಗಳನ್ನೂ ಕತ್ತರಿಸಿಕೊಂಡವನೇ ಶರಣನ್ಱಿ – ಉಪಾಯಭೂತನಲ್ಲದೆ, ಮಱ್ಱೊನ್ಱಿಲಮೇ–ಆದಿವ್ಯದೇಶಪ್ರಾಪ್ತಿಗೆ ನಮಗೆ ಬೇರೊಂದು ಉಪಾಯವಿಲ್ಲವಷ್ಟೆ!

( ಸ–ಗಾ–ರ || )—

ದಿವ್ಯಾ ಸಾ ನಗರೀತಿ ಪುಷ್ಪಮಹಿತೇ ಗ್ರಾಮೇ ನದೀಮಾತೃಕೇ
ದಿವ್ಯೇ ಸನ್ನಿಹಿತಃ ಪ್ರಭುರ್ವರಮ ಹರಿಃ ಕೃಷ್ಣಸ್ತು ಸೂರೀಶ್ವರಃ|
ಬಾಣಾವಾಸಪುರಂ ಪ್ರವಿಶ್ಯ ಚ ಯುಧಿ ತ್ರ್ಯಕ್ಷೇ ತು ದೂರಂ ಗತೇ
ವಿಷ್ಣುರ್ಬಾಣಸಹಸ್ರಬಾಹುಭಿದಸೌ! ನಾನ್ಯಶ್ಶರಣ್ಯೋಽಸ್ತಿ ನಃ ||

ತಾ|| ಸಾಕ್ಷಾದ್ವೈಕುಣ್ಠನಗರವೆಂಬಂತೆ ಸುಪ್ರಸಿದ್ಧವಾದ ಪುಷ್ಪೋದ್ಯಾನ ಪರಿವೃತವಾದ ಶ್ರೀ ನದೀಮಾತೃಕಗ್ರಾಮವೆಂಬ ಮಹಾನಗರದಲ್ಲಿ ನಿತ್ಯವಾಸ ಮಾಡುವ ಆಶ್ರಿತವತ್ಸಲನಾದ, ಶ್ರೀಕೃಷ್ಣರೂಪಿಯಾದ ನಿತ್ಯಸೂರೀಶ್ವರನು ಬಾಣಾಸುರನಗರವಂ ಹೊಕ್ಕು ರುದ್ರನದುರಭಿಮಾನವು ನಷ್ಟವಾಗುವಂತೆ ಘೋರಯುದ್ಧಗಳಂಮಾಡಿ ಬಾಣನ ಬಾಹುಸಹಸ್ರವನ್ನೂ ಕತ್ತರಿಸಿದವನಷ್ಟೆ! ಅನ್ತಹ ಸ್ವಾಮಿಯೇ ನಮಗೆ ಆದಿವ್ಯದೇಶಪ್ರಾಪ್ತಿಗೆ ಉಪಾಯಭೂತನಲ್ಲದೆ ಮತ್ತೊಂದು ಉಪಾಯವಿಲ್ಲವಷ್ಟೆ !

(೮) ಅನ್ರಿ ಮಱ್ಱೊನ್ರಿಲಮ್ ನಿನ್ ಶರಣೇ ಯೆನ್ರಕಲಿರುಮ್
ಪೊಯ್ಕೈಯಿನ್ವಾಯ್,
ನಿನ್ರು ತನ್ ನೀಳ್ಕೞಲೇತ್ತಿಯ ಆನೈಯಿನ್
ನೆಞ್ಜಿಡರ್ ತೀರ್ತ್ತ ಪಿರಾನ್,
ಶೆನ್ರಙ್ಗಿನಿದುಱೈಕಿನ್ರ ಶೆೞುಮ್ಪೊೞಿಲ್ ಶೂೞ್ ತಿರುವಾಱನ್ ವಿಳೈ,
ಒನ್ರಿ ವಲಂಶೆಯ್ಯ ಒನ್ರುಮೋ ತೀವಿನೈಯುಳ್ಳತ್ತಿನ್
ಶಾರ್ವಲ್ಲವೇ.

ಪ್ರ॥ ನೀ ಶರಣ್ ಅನ್ರಿ – ನಿನ್ನ ಚರಣಗಳೇ ಅಲ್ಲದೆ, ಮಱ್ಱೊನ್ರಿಲಮ್ – ಬೇರೊಂದನ್ನೂ ನಾನು ಹೊಂದಿಲ್ಲವು, ಎನ್ರು – ಎಂದು, ಅಕಲ್ – ವಿಶಾಲವಾದ, ಇರುಮ್–ಅಗಾಧವಾದ, ಪೊಯ್ಕೈಯಿನ್ವಾಯ್ – ಮಡುವಿನಲ್ಲಿ, ನಿನ್ರು–(ಮೊಸಳೆಯ ಬಾಯಿಗೆ ಸಿಕ್ಕಿ) ನಿಂತು, ನೀಳ್ಕೞಲ್ – ಆಪತ್ತನ್ನು ಹೊಂದಿದವರ ಬಳಿಗೆ ಬರುವಷ್ಟು ದೀರ್ಘವಾದ ಅವನ ಪಾದಗಳನ್ನು, ಏತ್ತಿಯ–"ನಾರಾಯಣ!" ಎಂದು ಸಮ್ಬನ್ಧವನ್ನು ಹೇಳಿ ಸ್ತುತಿಸಿದ, ಆನೈಯಿನ್–ಗಜೇನ್ದ್ರನ, ನೆಞ್ಜು ಇಡರ್–ಮನೋವ್ಯಥೆಯನ್ನು, ತೀರ್ತ್ತ–ಪರಿಹರಿಸಿದ, ಪಿರಾನ್–ಸ್ವಾಮಿಯು, ಶೆನ್ರು–ಆಶ್ರಿತರಿರುವ ಸ್ಥಲಕ್ಕೆ ಹೋಗಿ, ಅಙ್ಗು–ಅಲ್ಲಿ, ಇನಿದು–ಪ್ರೀತಿಯೊಡನೆ, ಉಱೈಕಿನ್ರ–ನಿತ್ಯವಾಸ ಮಾಡುವ, ಶೆೞುಮ್ ಪೊೞಿಲ್ ಶೂೞ್–ರಮ್ಯೋದ್ಯಾನಪರಿವೃತವಾದ, ತಿರುವಾಱನ್ ವಿಳೈ–ಶ್ರೀನದೀಮಾತೃಕಗ್ರಾಮವನ್ನು, ಒನ್ರಿ–ಸಮೀಪಿಸಿ, ವಲಂಶೆಯ್ಯ–ಪ್ರದಕ್ಷಿಣ ಮಾಡಲು, ಒನ್ರುಮೋ–ಸಾಧ್ಯವೋ? (ಸಾಧ್ಯವಾದರೆ) ತೀವಿನೈ - ಮಹಾಪಾಪಗಳು, ಉಳ್ಳತ್ತಿನ್ ಶಾರ್ವು ಅಲ್ಲವೇ–ಮನಸ್ಸಿನ ಸಂಬನ್ಧವನ್ನು ಬಿಟ್ಟುಹೋಗುವುವಷ್ಟೆ!

( ಸ–ಗಾ–ರ ॥ )—

ತ್ವತ್ಪಾದೌ ತು ವಿನಾ ನ ಮೇಽಸ್ತಿ ಶರಣಂ ಚೇತಿ ಹ್ರದೇ ದುರ್ಗಮೇ
ಗ್ರಾಹಗ್ರಸ್ತಪದೋ ಗಜಸ್ತು ಶರಣಂ ಯಸ್ಯಾಂಘ್ರಿಯುಗ್ಮಂ ಗತಃ ।
ಸೋಽಯಂ ದುಃಖಹರೋ ಹರಿರ್ವಿಜಯತೇ ಗ್ರಾಮೇ ನದೀಮಾತೃಕೇ
ಸಸ್ಯಾಢ್ಯೇ! ತದಿದಂ ಪುರಂ ಚ ಭಜತಾಂ ಸರ್ವಂ ಪ್ರಣಶ್ಯೇದಘಮ್ ॥

ತಾ॥ ನಿನ್ನಪಾದಗಳನ್ನೇ ನಾನು ಹೊಂದಿದೇನಲ್ಲದೆ ಮತ್ತೊಂದನ್ನು ಹೊಂದಿಲ್ಲವೆಂದು ಅಗಾಧವಾದ ಮಡುವಿನಲ್ಲಿ ಮೊಸಳೆಯ ಬಾಯಿಗೆ ಸಿಕ್ಕಿದ ಗಜೇನ್ದ್ರನು "ನಾರಾಯಣ!" ಎಂದು ತನ್ನ ಆತ್ಮಸಮ್ಬನ್ಧವನ್ನು ಸೂಚಿಸಿ ಸ್ತೋತ್ರಮಾಡಲು, ಆ ಗಜೇಂದ್ರನ ಆಪತ್ತನ್ನೂ ಮನೋವ್ಯಥೆಯನ್ನೂ ಪರಿಹರಿಸಿದ ಸ್ವಾಮಿಯು ಆಶ್ರಿತಸ್ಥಲವಾದ ರಮ್ಯೋದ್ಯಾನಪರಿವೃತವಾದ ಶ್ರೀ ನದೀಮಾತೃಕ ಗ್ರಾಮಕ್ಕೆ ಬಂದು ನಿತ್ಯವಾಸವಂ ಮಾಡುತ್ತಿರುವುದರಿಂದ ಈ ದಿವ್ಯಕ್ಷೇತ್ರವನ್ನು ಸಮೀಪಿಸಿ ಪ್ರದಕ್ಷಿಣಮಾಡಿದರೆ ನಮ್ಮ ಮಹಾಪಾಪಗಳೆಲ್ಲವೂ ನಿಶ್ಶೇಷವಾಗಿ ನಷ್ಟವಾಗುವುವು.

(೯) ತೀವಿನೈಯುಳ್ಳತ್ತಿಱ್ ಶಾರ್ವಲ್ಲವಾಕಿ
ತ್ತೆಳಿವಿಶುಮ್ಬೈಱಿಲುಱ್ಱಾಲ್,
ನಾವಿನುಳ್ಳುಮುಳ್ಳತ್ತುಳ್ಳುಮಮೈನ್ದ
ತೊೞಿಲಿನುಳ್ಳುಮ್ ನವಿಱ್ಱು,
ಯಾವರುಮ್‌ವನ್ದು ವಣಙ್ಗುಮ್ ಪೊೞಿಲ್
ತಿರುವಾಱನ್ವಿಳೈಯದನೈ,
ಮೇವಿ ವಲಂಶೆಯ್ದು ಕೈತೊೞ ಕ್ಕೂಡುಙ್ಕೊಲೆನ್ನುಮೆನ್
ಶಿನ್ದನೈಯೇ.

ಪ್ರ॥ ತೀವಿನೈ-ಕ್ರೂರವಾದ ಪಾಪಗಳು, ಉಳ್ಳತ್ತಿಱ್-ಮನಸ್ಸಿನಲ್ಲಿ, ಶಾರ್ವು ಅಲ್ಲವಾಕಿ-ಸಮ್ಬನ್ಧವಿಲ್ಲದಂತೆ ಆಗಿ, ತೆಳಿವಿಶುಮ್ಬು-ಸ್ವರೂಪ ಪ್ರಕಾಶವುಂಟಾಗುವಂತೆ ವಿಶದವಾದ ಪರಮಾಕಾಶದಲ್ಲಿ, ಏಱಿಲ್-ಹತ್ತೋಣವು, ಉಱ್ಱಾಲ್-ಸಂಭವಿಸಿದರೂ, ಎನ್ ಶಿನ್ದನೈ-ನನ್ನ ಮನಸ್ಸು, ನಾವಿನುಳ್ಳುಮ್-ನಾಲಿಗೆಯಲ್ಲೂ, ಉಳ್ಳತ್ತು ಉಳ್ಳುಮ್ - ಮನಸ್ಸಿನಲ್ಲೂ, ಅಮೈನ್ದ - ಅದಕ್ಕೆ ತಕ್ಕ, ತೊೞಿಲಿನ್ ಉಳ್ಳುಮ್-ಕಾಯಿಕ ವ್ಯಾಪಾರದಲ್ಲೂ, ನವಿಱ್ಱು-ಸಮ್ಬನ್ಧವುಳ್ಳವರಾಗಿ, ಯಾವರುಮ್-ಸಕಲಚೇತನರೂ, ವನ್ದುವಣಙ್ಗುಮ್ - ಬಂದು ಸೇವಿಸುವ, ಪೊೞಿಲ್-ಉದ್ಯಾನಗಳಿಂದ ಕೂಡಿದ, ತಿರುವಾಱನ್ವಿಳೈ-ಶ್ರೀನದೀಮಾತೃಕ ಗ್ರಾಮವೆಂಬ, ಅದನೈ-ಆ ದಿವ್ಯಕ್ಷೇತ್ರವನ್ನು, ಮೇವಿ-ಸಮೀಪಿಸಿ, ವಲಮ್‌ಶೆಯ್ದು - ಪ್ರದಕ್ಷಿಣ ಮಾಡಿ, ಕೈತೊೞ-ಅಂಜಲಿಮಾಡಲು, ಕೂಡುಮ್‌ಕೊಲ್-ಅನುಕೂಲಿಸುವುದೋ, ಎನ್ನುಮ್-ಎಂದು ಚಿನ್ತಿಸುತ್ತಿದೆ.

( ಸ–ಗಾ–ರ ‖ )—

> ಕ್ರೂರಾಘಾತ್ಯಯತಃ ಪರಂ ಪದಮಪಿ ಪ್ರಾಪ್ನೋಮಿ ಚೇನ್ಮಾನಸಂ
> ಸಕ್ತಂ ಸ್ಯಾನ್ಮಮ ಸಪ್ರದಕ್ಷಿಣಮಿದಂ ಗ್ರಾಮೇ ನದೀಮಾತೃಕೇ ।
> ವನ್ದ್ಯೇ ವಾಙ್ಮನಸಾನುರೂಪಕೃತಿಭಿಸ್ಸರ್ವೈಶ್ಚ ಲೋಕೈಸ್ಸ್ವಯಂ
> ಸಸ್ಯಾಢ್ಯೇ ಪರಮೇ ಸದಾಽಪಿ ಕುತುಕಾತ್ ಸಂಸೇವಿತುಂ ತತ್ಪುರಮ್ ‖

ತಾ‖ ಕ್ರೂರವಾದ ಪಾಪಗಳ ಸಮ್ಬನ್ಧವೇ ಇಲ್ಲದಂತೆ ಪರಮಪದವನ್ನು ಹೊಂದಲು ಅನುಕೂಲಿಸಿದಾಗ್ಯೂ, ನನ್ನ ಮನಸ್ಸು–ಮನೋವಾಕ್ಕಾಯಗಳಿಂದ ಸಕಲಜೀತನ ಸಂಸೇವ್ಯವಾದ ದಿವ್ಯೋದ್ಯಾನ ಪರಿವೃತವಾದ ಶ್ರೀನದೀಮಾತೃಕ ಗ್ರಾಮವೆಂಬ ಕ್ಷೇತ್ರವನ್ನೇ ಆಶ್ರಯಿಸಿ ಪ್ರದಕ್ಷಿಣಮಾಡುವಂತೆ ಸಂಭವಿಸುವುದೋ? —ಎಂದು ಚಿನ್ತಿಸುತ್ತಿದೆ.

(೧೦) ಶಿನ್ದೈ ಮಱ್ಱೊನ್ಱಿನ್ ತಿಱತ್ತದಲ್ಲಾ ತನ್ಮೈ
ತೇವಪಿರಾನಱಿಯುಮ್,
ಶಿನ್ದೈಯಿನಾಲ್ ಶೆಯ್ವದಾನಱಿಯಾದನ
ಮಾಯಙ್ಗಳೊನ್ಱುಮಿಲ್ಲೈ,
ಶಿನ್ದೈಯಿನಾಲ್ ಶೊಲ್ಲಿನಾಲ್ ಶೆಯ್ಕೈಯಾಲ್
ನಿಲತ್ತೇವರ್ ಕುೞು ವಣಙ್ಗುಮ್,
ಶಿನ್ದೈ ಮಕಿೞ್ ತಿರುವಾಱನ್ವಿಳೈಯುಱ್ಱ
ತೀರ್ತ್ತನುಕ್ಕಱ್ಱ ಪಿನ್ನೇ.

ಪ್ರ‖ ಶಿನ್ದೈಯಿನಾಲ್ – ಮನಸ್ಸಿನಿಂದಲೂ, ಶೊಲ್ಲಿನಾಲ್–ವಾಕ್ಕಿನಿಂದಲೂ, ಶೆಯ್ಕೈಯಾಲ್–ಕಾಯದಿಂದಲೂ, ನಿಲತ್ತೇವರ್–ಭೂಸುರರಾದ ಭಾಗವತರ, ಕುೞು–ಸಂಘವು, ವಣಙ್ಗುಮ್–ನಮಸ್ಕಾರಮಾಡುವ, ಶಿನ್ದೈಮಕಿೞ್ – (ಭಕ್ತರ) ಮನಸ್ಸಿಗೆ ಆನನ್ದಕರವಾದ, ತಿರುವಾಱನ್ವಿಳೈ–ಶ್ರೀನದೀಮಾತೃಕ ಗ್ರಾಮದಲ್ಲಿ, ಉಱ್ಱ–ನಿತ್ಯವಾಸಮಾಡುವ, ತೀರ್ತ್ತನುಕ್ಕು–ಪರಿಶುದ್ಧ ಸ್ವರೂಪನಾದ ಭಗವನ್ತನಿಗೆ, ಅಱ್ಱಪಿನ್ನೇ–ಅನನ್ಯಾರ್ಹ ಶೇಷವೆಂದು ನಿಶ್ಚಯವುಂಟಾದಮೇಲೆ, ಶಿನ್ದೈ–ಮನಸ್ಸು, ಮಱ್ಱೊನ್ಱಿನ್–ಬೇರೆ ಒಂದರ, ತಿಱತ್ತದಲ್ಲಾ ತನ್ಮೈ–ಪಕ್ಕದಲ್ಲಿ ಸೇರುವುದಿಲ್ಲವೆಂಬ ಪ್ರಕಾರವನ್ನು, ತೇವಪಿರಾನ್ – ನಿತ್ಯಸೂರೀಶ್ವರನಾದ ಸ್ವಾಮಿಯೇ, ಅಱಿಯುಮ್ – ತಿಳಿದಿರುತ್ತಾನೆ. ಶಿನ್ದೈಯಿನಾಲ್ – ಮನಸ್ಸಿನಿಂದ, ಶೆಯ್ವ–

ಮಾಡಲ್ಪಡುವ, ಮಾಯಙ್ಗಳ್–ಗೋಪ್ಯವಾದ ಕೃತ್ರಿಮ ವ್ಯಾಪಾರಗಳು, ತಾ–ಅವನು ತಾನೇ, ಅಱಿಯಾದನ – ತಿಳಿಯದೆ ಇರುವುವು, ಒನ್ಱುಮ್ ಇಲ್ಲೈ – ಒಂದೂ ಇಲ್ಲ.

( ಸ–ಗಾ–ರ || )–

ಚೇತೋ ವಾಕ್ತನುಭಿಸ್ತು ಭಕ್ತನಿವಹೈರ್ನಿತ್ಯಾನುಭಾವ್ಯೇ ಮುದಾ
ನಿತ್ಯಂ ಭಾತಿ ಹಿ ತೀರ್ಥಪುಣ್ಯಚರಿತೋ ಗ್ರಾಮೇ ನದೀಮಾತೃಕೇ |
ಶ್ರೀಶಸ್ತತ್ರ ಮನೋ ಮಮಾಸ್ತಿ ಸತತಂ! ನಾನ್ಯತ್ರ ಚೇತಿ ಸ್ವಯಂ
ಸೂರೀನ್ದ್ರಃ ಪರಮಪ್ಯವೇತ್ತಿ! ಹೃದಯೇ ಗೋಪ್ಯಂ ನ ಕಿಞ್ಚಿದ್ಭವೇತ್||

ತಾ|| ಮನೋವಾಕ್ಕಾಯಗಳಿಂದ ಭೂದೇವರಾದ ಭಾಗವತರ ಸಂಘದಿಂದ ಸಂಸೇವ್ಯವಾದ ಮನೋರಮವಾದ ಶ್ರೀನದೀಮಾತೃಕ ಗ್ರಾಮದಲ್ಲಿ ನಿತ್ಯವಾಸ ಮಾಡುವ ಸರ್ವಪಾವನಮೂರ್ತಿಗೇ ಅನನ್ಯಾರ್ಹಶೇಷವೆಂದು ನಿಶ್ಚಯವುಂಟಾದ ಮೇಲೆ ಮನಸ್ಸು ಬೇರೆ ಒಂದುಕಡೆ ಸೇರುವುದಿಲ್ಲವೆಂಬುದನ್ನು ನಿತ್ಯಸೂರೀಶ್ವರನಾದ ಆ ಸ್ವಾಮಿಯೇ ತಿಳಿದಿರುತ್ತಾನೆ. ಮನಸ್ಸಿನಿಂದ ಗೋಪ್ಯವಾಗಿ ಮಾಡಲ್ಪಡುವ ಕೃತ್ರಿಮ ವ್ಯಾಪಾರಗಳು ಅವನಿಗೆ ತಿಳಿಯದೇ ಇರುವುವು ಯಾವುವೂ ಇಲ್ಲವಷ್ಟೆ!

(೧೧) ತೀರ್ತ್ತನುಕ್ಕಱ್ಱಪಿನ್ ಮಱ್ಱೋರ್
ಶರಣಿಲ್ಲೈ ಯೆನ್ಱೆಣ್ಣಿ,
ತೀರ್ತ್ತನುಕ್ಕೇ ತೀರ್ತ್ತಮನತ್ತನನಾಕಿ
ಚ್ಚೆೞುಙ್ಕುರುಕೂರ್ಚ್ಚಡಕೋಪನ್ ಶೊನ್ನ,
ತೀರ್ತ್ತಙ್ಗಳಾಯಿರತ್ತುಳ್ಳಿವೈಪತ್ತುಮ್ ವಲ್ಲಾರ್ಕಳೈ,
ತೇವರ್ ವೈಕಲ್
ತೀರ್ತ್ತಙ್ಗಳೇಯೆನ್ಱು ಪೂಶಿತ್ತು ನಲ್ಕಿ ಯುರೈಪ್ಪರ್
ತಮ್ ತೇವಿಯರ್ಕ್ಕೇ.

ಪ್ರ|| ತೀರ್ತ್ತನುಕ್ಕು–ಪರಿಶುದ್ಧನಾದ ಸ್ವಾಮಿಗೇ, ಅಱ್ಱಪಿನ್– ಶೇಷಭೂತನೆಂದು ನಿಶ್ಚಯಿಸಿಕೊಂಡಿರುವಾಗ, ಮಱ್ಱೋರ್–ಬೇರೆ ಒಂದು, ಶರಣ್ ಇಲ್ಲೈ–ಉಪಾಯವಿಲ್ಲ, ಎನ್ಱು ಎಣ್ಣಿ – ಎಂದು ಭಾವಿಸಿ, ತೀರ್ತ್ತನುಕ್ಕೇ – ಆ ಪಾವನ

ಮಾಡಲ್ಪಡುವ, ಮಾಯಜ್ಜಳ್‌–ಗೋಪ್ಯವಾದ ಕೃತ್ರಿಮ ವ್ಯಾಪಾರಗಳು, ತಾ–ಅವನು ತಾನೇ, ಅಱಿಯಾದನ – ತಿಳಿಯದೆ ಇರುವುವು, ಒನ್ಱುಮ್ ಇಲ್ಲೈ – ಒಂದೂ ಇಲ್ಲ.

( ಸ–ಗಾ-ರ || )–

ಚೇತೋ ವಾಕ್ತನುಭಿಸ್ತು ಭಕ್ತನಿವಹೈರ್ನಿತ್ಯಾನುಭಾವ್ಯೇ ಮುದಾ
ನಿತ್ಯಂ ಭಾತಿ ಹಿ ತೀರ್ಥಪುಣ್ಯಚರಿತೋ ಗ್ರಾಮೇ ನದೀಮಾತೃಕೇ |
ಶ್ರೀಶಸ್ತತ್ರ ಮನೋ ಮಮಾಸ್ತಿ ಸತತಂ! ನಾನ್ಯತ್ರ ಚೇತಿ ಸ್ವಯಂ
ಸೂರೀನ್ದ್ರಃ ಪರಮದ್ಯವೇತ್ತಿ! ಹೃದಯೇ ಗೋಪ್ಯಂ ನ ಕಿಞ್ಚಿದ್ಭವೇತ್ ||

ತಾ|| ಮನೋವಾಕ್ಕಾಯಗಳಿಂದ ಭೂದೇವರಾದ ಭಾಗವತರ ಸಂಘದಿಂದ ಸಂಸೇವ್ಯವಾದ ಮನೋಹರವಾದ ಶ್ರೀನದೀಮಾತೃಕ ಗ್ರಾಮದಲ್ಲಿ ನಿತ್ಯವಾಸ ಮಾಡುವ ಸರ್ವಪಾವನಮೂರ್ತಿಗೇ ಅನನ್ಯಾರ್ಹಶೇಷವೆಂದು ನಿಶ್ಚಯವುಂಟಾದ ಮೇಲೆ ಮನಸ್ಸು ಬೇರೆ ಒಂದುಕಡೆ ಸೇರುವುದಿಲ್ಲವೆಂಬುದನ್ನು ನಿತ್ಯಸೂರೀಶ್ವರನಾದ ಆ ಸ್ವಾಮಿಯೇ ತಿಳಿದಿರುತ್ತಾನೆ. ಮನಸ್ಸಿನಿಂದ ಗೋಪ್ಯವಾಗಿ ಮಾಡಲ್ಪಡುವ ಕೃತ್ರಿಮ ವ್ಯಾಪಾರಗಳು ಅವನಿಗೆ ತಿಳಿಯದೇ ಇರುವುವು ಯಾವುವೂ ಇಲ್ಲವಷ್ಟೆ!

(೧೧) ತೀರ್ತ್ತನುಕ್ಕಱ್ಱಪಿನ್ ಮಱ್ಱೋರ್
ಶರಣಿಲ್ಲೈ ಯೆನ್ಱೆಣ್ಣಿ,
ತೀರ್ತ್ತನುಕ್ಕೇ ತೀರ್ತ್ತಮನತ್ತನನಾಕಿ
ಚ್ಚೆಱಿಯಕ್ಕುರುಕೂರ್‌ಚ್ಚಡಕೋಪನ್ ಶೊನ್ನ,
ತೀರ್ತ್ತಙ್ಗಳಾಯಿರತ್ತುಳ್ಳಿವೈಪತ್ತುಮ್ ವಲ್ಲಾರ್‌ಕಳೈ,
ತೇವರ್‌ ವೈಕಲ್
ತೀರ್ತ್ತಙ್ಗಳೇಯೆನ್ಱು ಪೂಶಿತ್ತು ನಲ್‌ಕಿ ಯುರೈಪ್ಪರ್
ತಮ್ ತೇವಿಯರ್‌ಕ್ಕೇ.

ಪ್ರ|| ತೀರ್ತ್ತನುಕ್ಕು–ಪರಿಶುದ್ಧನಾದ ಸ್ವಾಮಿಗೇ, ಅಱ್ಱಪಿನ್– ಶೇಷಭೂತನೆಂದು ನಿಶ್ಚಯಿಸಿಕೊಂಡಿರುವಾಗ, ಮಱ್ಱು ಓರ್–ಬೇರೆ ಒಂದು, ಶರಣ್ ಇಲ್ಲೈ–ಉಪಾಯವಿಲ್ಲ, ಎನ್ಱು ಎಣ್ಣಿ – ಎಂದು ಭಾವಿಸಿ, ತೀರ್ತ್ತನುಕ್ಕೇ – ಆ ಪಾವನ

ಮೂರ್ತಿಗೇ, ತೀರ್ತ್ತ-ನಿರ್ಣಯಿಸಲ್ಪಟ್ಟ, ಮನತ್ತಿನ್ಅರ್ ಆಕಿ-ಮನಸ್ಸುಳ್ಳವರಾಗಿ, ತ್ತಿರುಮ್ – ರಮಣೀಯವಾಗ್, –ಕುರುಕೂರ್ ಶಡಕೋಪನ್ – ಕುರುಕಾಪುರಿಯ ಶಠಾರಿಮುನಿವರ್ಯರು, ಶೊನ್ನ – ರಚಿಸಿದ, ತೀರ್ತ್ತಙ್ಗಳ್ – ಆಯಾ ವಿದ್ಯಾಸ್ಥಾನಗಳಾದ (ಪಾವನಪ್ರಬನ್ಧಗಳಾದ), ಆಯಿರತ್ತುಳ್– ಸಹಸ್ರ ಪದ್ಯಮಾಲೆಯೊಳು, ಇವೈಪತ್ತುಮ್ -ಈ ಹತ್ತು ಪದ್ಯಗಳನ್ನು, ವಲ್ಲಾರ್ಕಳೈ–ಬಲ್ಲವರನ್ನು, ತೇವರ್- ನಿತ್ಯಸೂರಿಗಳು, ವೈಕಲ್ – ಪ್ರತಿದಿನವೂ (ಯಾವಾಗಲೂ), ತಮ್ ತೇವಿಯರ್ಕ್ಕೇ –ತಮ್ಮ ಪತ್ನೀಜನರಿಗೆ, ಪೂಶಿತ್ತು – ಗೌರವದೊಡನೆ, ನಲ್ಕಿ – ಪ್ರೀತಿಸಿ, ತೀರ್ತ್ತಙ್ಗಳೇ ಎನ್ರು – ಪಾವನರಾದ ಮಹಾತ್ಮರೇ ಎಂದು, ಉರೈಪ್ಪರ್ – ಹೇಳುವರು.

( ಸ-ಗಾ-ರ || )—

ತೀರ್ಥಂ ತಂ ಶರಣಂ ಗತೋಽಸ್ಮಿ ಸತತಂ! ನಾನ್ಯಂ ಕಿಲೇತಿ ಸ್ವಯಂ
ತೀರ್ಥಸ್ಯೈವ ಪರಸ್ಯ ದಾಸ್ಯನಿರತೋ ವಿಷ್ಣೋಶ್ಶಠಾರಿರ್ಮುನಿಃ |
ತೀರ್ಥಪ್ರಾಯಮಿದಂ ಸಹಸ್ರಮುಖರೋದ್ದಿವ್ಯಂ ಪಠನ್ತೀಹ ಯೇ
ತಚ್ಛ್ರೇದಂ ದಶಕಂ ಸ್ತುವನ್ತಿ ಕಿಲ ತಾನ್ ದೇವಾಸ್ಸ್ವದೇವೀಃ ಪ್ರತಿ ||

ತಾ|| ಪಾವನನಾದ ಸ್ವಾಮಿಗೇ ಶೇಷಭೂತನೆಂದು ನಿಶ್ಚಯಿಸಿಕೊಂಡಿರುವಾಗ ಬೇರೆ ಒಂದು ಉಪಾಯವೂ ಇಲ್ಲವೆಂದು ಭಾವಿಸಿ ಅವನಿಗೇ ನಿರ್ಣೀತವಾದ ಮನಸ್ಸುಳ್ಳವರಾದ ಕುರುಕಾಪುರಿಯ ಶ್ರೀ ಶಠಾರಿಮುನಿವರ್ಯರು ರಚಿಸಿದ ಪಾವನವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಪಠನ ಮಾಡಬಲ್ಲವರನ್ನು ನಿತ್ಯಸೂರಿಗಳು ಗೌರವದಿಂದ ಪ್ರೀತಿಸಿ, ತಮ್ಮ ಪತ್ನೀಜನರಿಗೆ ಇವರೇ ಪಾವನರಾದ ಮಹಾತ್ಮರು ಎಂದು ಇವರನ್ನೇ ಶ್ಲಾಘಿಸಿ ಹೇಳುವರು.

( ದ್ರ-ಉ-ಸಂ || )—

ಆನನ್ದಮಾಕಲಯಿತುಂ ಕಮಲಾಸಖಸ್ಯ
ಸಂಶ್ರಾವ್ಯ ತತ್ಕರುಣಯಾ ಸ್ವಕೃತಂ ಪ್ರಬನ್ಧಮ್ |
ಅರ್ಹೇ ತದಾದರಣಶಾಲಿನಿ ದಿವ್ಯದೇಶೇ
ಯಾತ್ರಾಮನೋರಥಮಸೌ ದಶಮೇ ಚಕಾರ ||

(ದ್ರ-ಉ-ತಾ-ರ || )—

ವೈಕುಣ್ಠೇ ನಿತ್ಯಯೋಗಾಚ್ಛ್ರಿತವಿವಶತಯಾಽನನ್ತಕೀರ್ತ್ಯುಜ್ಜ್ವಲತ್ವಾ-
ಚ್ಛೇಷೇಶಾಯಿತ್ವ-ರುಕ್ಮಿಣ್ಯಭಿಮತಸುರಜಿದ್ಬಾಣದೋಃಖಣ್ಡನಾದ್ಯೈಃ |
ಗ್ರಾಹಗ್ರಸ್ತೇಭಸಂರಕ್ಷಾಭಿರುಚಿತವಿಷಯೇ ಸನ್ನಿಧಾನಾಚ್ಛುಚಿತ್ವಾತ್
ಸ್ತೋತ್ರಾಣಾಂ ದುಃಖಜಾತಂ ವಿಘಟಯತಿ ಹರಿಸ್ತೀರ್ಥಪಾದೋಽಭ್ಯಧಾಯಿ

ಶಾಠ್ಯಾಶಙ್ಕಾಸಹಿಷ್ಣುಂ ಪ್ರಶಮಿತಜನತಾಗರ್ಹಣಂ ಸ್ಪಷ್ಟರಕ್ಷಂ
ವ್ಯಾಕುರ್ವನ್ತಂ ಸ್ವರಕ್ಷಾಕ್ರಮಮಖಿಲಜನಸ್ನೇಹಿತಾಂ ದರ್ಶಯನ್ತಮ್ |
ಸ್ವೀಯಾಕ್ರನ್ದಚ್ಛಿದೋತ್ಕಂ ಸ್ಮರಣಸುವಿಶದಂ ವಿಸ್ಮಯಾರ್ಹದ್ವಿಭೂತಿಂ
ಸ್ತೋತ್ರೇ ಯುಞ್ಜಾನ್ತಮಾಹ ಸ್ತುತಿಕೃದಘಹರಂ ಸಪ್ತಮೇಽನಿಷ್ಟಚೋರಮ್

(ಈ ದಶಮದಶಕದ ಸಾರಾಂಶ)—

ಈ ಹತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಮಲಯಾಳದೇಶದಲ್ಲಿರುವ ತಿರುವಾಟ್ಟೀವಿಳ್ಳೆಯೆಂಬ ಶ್ರೀ ನದೀಮಾತೃಕಗ್ರಾಮದ ಸ್ವಾಮಿಯ ಪಾದಾರವಿನ್ದಗಳಲ್ಲಿ ನಿತ್ಯಕೈಙ್ಕರ್ಯವಂ ಮಾಡಲಪೇಕ್ಷಿಸಿ, ಆ ಗ್ರಾಮವನ್ನೇ ಪ್ರದಕ್ಷಿಣ ಮಾಡಬೇಕೆಂದೂ, ಆ ಗ್ರಾಮಕ್ಕೆ ತೀರ್ಥಸೇಚನವಂ ಮಾಡಬೇಕೆಂದೂ, ಅದನ್ನೇ ನಮಸ್ಕರಿಸಬೇಕೆಂದೂ, ಅದನ್ನೇ ಸ್ಮರಿಸಬೇಕೆಂದೂ, ಅದನ್ನೇ ಹಾಡಿ ಸಂಕೀರ್ತನ ಮಾಡಬೇಕೆಂದೂ ನಿಶ್ಚಯಿಸಿ, ಶ್ರೀ ವಾಮನಾವತಾರ-ಗೋಪಾಲಕ-ಮಧುರಾಪುರೀಶ - ಶೇಷಶಾಯಿ - ರುಕ್ಮಿಣೀಪತಿ - ಬಾಣಾಸುರ ಬಾಹುಚ್ಛೇದಿ-ಗಜೇನ್ದ್ರಪಾಲಕ - ಇತ್ಯಾದಿ ರೂಪಿಯಾದ ಭಗವನ್ತನು ಆ ದಿವ್ಯದೇಶದಲ್ಲಿ ನಿತ್ಯವಾಸವಂ ಮಾಡುತ್ತಿರುವುದರಿಂದ ಅವನನ್ನೇ ಭಜಿಸಿದರೆ ಸರ್ವಪಾಪ ವಿಮೋಚನವುಂಟಾಗಿ ಸಕಲಾಭೀಷ್ಟ ಸಿದ್ಧಿಯಾಗುವುದೆಂದು—ನಿಷ್ಕರ್ಷಿಸಿ ಇರುತ್ತಾರೆ.

(ಈ ಸಪ್ತಮ ಶತಕದ ಸಾರಾಂಶ)—

ಈ ಸಪ್ತಮ ಶತಕದಲ್ಲಿ—(೧) ವಿರೋಧಿಯಾಗಿರುವ ಶರೀರೇನ್ದ್ರಿಯಾದಿಗಳು ಭಗವನ್ತನಿಗೇ ವಶ್ಯಗಳೆಂತಲೂ, (೨) ಪ್ರಾಪ್ಯಪ್ರಾವಣ್ಯವೂ ಆರ್ತಿಜನಕವೆಂತಲೂ, (೩) ಆರ್ತಿಶಾನ್ತಿಯು ದಿವ್ಯದೇಶಪ್ರಾಪ್ತಿಜನ್ಯವೆಂತಲೂ, (೪) ಆರ್ತಿಹೇತುವಾದ ವಿರೋಧಿಯು ಅವನ ವಿಜಯಾಪದಾನ ಸಂಕೀರ್ತನದಿಂದ ನಿವರ್ತ್ಯವೆಂತಲೂ, (೫) ವಿಭವಾವತಾರ ಗುಣಗಳು ಸರ್ವಲೋಕೋಜ್ಜೀವನಗಳೆಂತಲೂ, (೬) ಸಾಕ್ಷಾತ್ಕಾರದ ಅಲಾಭದಿಂದ ಆಕ್ರನ್ದನವೇ ಫಲಕಾರಿಯೆಂತಲೂ, (೭) ಸೌನ್ದರ್ಯಾದಿ ಗುಣಗಳೂ ಕೂಡ ವಿರಹದಶೆಯಲ್ಲಿ ದುಃಖವರ್ಧಕಗಳೆಂತಲೂ (೮) ವಿಚಿತ್ರವಿಭೂತಿಯೋಗವೇ ಅನುಭಾವ್ಯವೆಂತಲೂ (೯) ವಾಚಿಕಕೈಙ್ಕರ್ಯದಿಂದ ವಿರೋಧಿನಿವೃತ್ತಿಯನ್ನು ಈಶ್ವರನೇ ನಡೆಸುತ್ತಾನೆಂತಲೂ, (೧೦) ಅವನ ದಿವ್ಯದೇಶದ ಸೇವೆಯೇ ಸರ್ವಪಾಪಹರವಾಗಿ ಸರ್ವಾಭೀಷ್ಟಸಿದ್ಧಿಕರವೆಂತಲೂ—ಕ್ರಮೇಣ ಹತ್ತು ದಶಕಗಳಲ್ಲೂ ಶ್ರೀಶಠಾರಿ ಮುನಿವರ್ಯರಿಂದ ನಿರೂಪಿಸಲ್ಪಟ್ಟಿದೆ.

**ಈಪ್ರಕಾರ ಈ ಸಪ್ತಮಶತಕದಲ್ಲಿ ವಿರೋಧಿಸ್ವರೂಪವು ಪ್ರತಿಪಾದಿತವಾಗಿದೆ.**

ಶ್ರೀಮದ್ಯಾದವಶೈಲಶೃಙ್ಗರೂಪಿಣಾ ಶ್ರೀಕಲ್ಕಿಸಿಂಹಾತ್ಮನಾ
ಶ್ರೀಮಲ್ಲೀಶ್ವರಕೃಷ್ಣಸನ್ನಿಧಿಜುಷಾ ಕಲ್ಯಾಣಪುರ್ಯಾಮಿಹ ।
ಸರ್ವೇಷಾಂ ಜಗತಾಂ ತಮಶ್ಶಮಯತಾ ಕರ್ಣಾಟವಾಣ್ಯಾಽಧುನಾ
ವ್ಯಾಖ್ಯಾತಂ ಶತಕಂ ಚ ಸಪ್ತಮಮಿದಂ ಗಾಥಾಸಹಸ್ರೇ ಮುನೇಃ ॥

ಲಲಿತಸರಣಿನಾಮ್ನೀ ಕೋಮಲಾ ದಿವ್ಯಭಾವಾ
ಜಯತು ಜಗತಿ ಟೀಕಾ ಮೇಽತ್ರ ಕರ್ಣಾಟವಾಣ್ಯಾ ।
ಶಠರಿಪುಮುನಿಗಾಥಾದಿವ್ಯಸಾಹಸ್ರಮಾಲಾ-
ವಿವೃತಿರಮೃತಪೂರ್ಣಾ ಲೋಕಸಞ್ಜೀವಿನೀಯಮ್ ॥

---

ಸಹಸ್ರಗಾಥಾರತ್ನಾವಳ್ಯಾಖ್ಯಾ ವ್ಯಾಖ್ಯಾ ಮಯಾ ಕೃತಾ ।
ಗೈರ್ವಾಣೀ ! ಶತಕಂ ತತ್ರ ಸಪ್ತಮಂ ವಿವೃತಂ ಶುಭಮ್ ॥

ಮಮ ಶ್ರೀಕಲ್ಕಿಸಿಂಹಸ್ಯ ಭಕ್ತಾ ಭಗವತೋ ಹರೇಃ ।
ಶಠಾರಿವತ್ ಸ್ವಯಂ ಭೋಗ್ಯಾಃ ಪರಮಾನನ್ದಮಾಪ್ನುಯುಃ ॥

---

ಇಂತು ಶ್ರೀ ಶಠಾರಿಮುನಿವರ್ಯ ವಿರಚಿತವಾದ
ತಿರುವಾಯ್ಮೊೞಿಯೆಂಬ
ಸುಪ್ರಸಿದ್ಧವಾದ ಸಹಸ್ರಗಾಥಾತ್ಮಕ- ದ್ರಾವಿಡ ದಿವ್ಯಪ್ರಬನ್ಧದ
ಲಲಿತಸರಣಿಯೆಂಬ ಕರ್ಣಾಟಭಾಷಾ ಟೀಕೆಯೊಳ್
ಸಪ್ತಮಶತಕದ ವ್ಯಾಖ್ಯಾನವು ಇಲ್ಲಿಗೆ
ಸಮ್ಪೂರ್ಣವಾಗಿದೆ.

---

ಶ್ರೀಮತೇ ಶಠಕೋಪಾಯ ನಮಃ.
ಶ್ರೀಮತೇ ಕಲ್ಕಿಸಿಂಹಾಯ ಭಗವತೇ ನಮಃ.

---

ಮಙ್ಗಳಂ ಕಲ್ಕಿಸಿಂಹಾಯ ಶ್ರೀಮತೇ ಪರಮಾತ್ಮನೇ ।
ಶ್ರೀ ಶಠಾರಿಮುನೀನ್ದ್ರಾಯ ಸರ್ವೇಷಾಮಸ್ತು ಮಙ್ಗಳಮ್ ॥

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು ಸಿಟಿ.